ಲಲಿತಸಾಹಿತ್ಯಮಾಲೆಯ ೧೩ನೆಯ ಕುಡಿ

# ಹಕ್ಕಿಯ ನೋಟ

ವ್ಯಕ್ತಿಪರಿಚಯಗಳು

ದತ್ತಾತ್ರೇಯ ಕುಲಕರಣಿ

ಲಲಿತ ಸಾಹಿತ್ಯಮಾಲೆ
ಧಾರವಾಡ

೧೯೪೫ ] [ ೦-೧೨-೦

ಸಂಪಾದಕರು:

**ಚುಳಕಿ ಗೋವಿಂದರಾಯರು**

**ಲಲಿತ ಸಾಹಿತ್ಯಮಾಲೆ, ಧಾರವಾಡ**

ಮಾರಾಟಗಾರರು:

**ಮನೋಹರ ಗ್ರಂಥಭಾಂಡಾರ, ಧಾರವಾಡ**

**ಕನ್ನಡ ಪುಸ್ತಕಾಲಯ, ಬೆಳಗಾವಿ**



ಪ್ರಕಾಶಕರು

**ದ. ಬಾ. ಕುಲಕರಣಿ**

ಮನೋಹರ ಗ್ರಂಥಭಾಂಡಾರ

**ಧಾರವಾಡ**

ಮುದ್ರಕರು

**ಎನ್. ಎಸ್. ಬೆಂಗೇರಿ**

ವಿಜಯ ಮುದ್ರಾಲಯ

**ಧಾರವಾಡ**

# ಅರಿಕೆ

ಲಲಿತ ಸಾಹಿತ್ಯಮಾಲೆಯ ಮೂರನೆಯ ವರುಷ ಈ 'ಹಕ್ಕಿಯ ನೋಟ' ದಿಂದ ಆರಂಭವಾಗುತ್ತದೆ. ಈ ಎರಡು ವರುಷ ಪುಸ್ತಕ ಪ್ರಕಾಶನಕ್ಕೆ ಇದ್ದ ತೊಂದರ ಇನ್ನು ಕೆಲ ಮಟ್ಟಿಗೆ ಕಡಿಮೆಯಾಗಬಹುದೆಂಬ ನಿರೀಕ್ಷೆಯಿಂದ ಮಾಲೆಯ ಚಂದಾ ಹಣವನ್ನು ಒಂದು ರೂಪಾಯಿ ಕಡಿಮೆಮಾಡಿದೆ. ಅಂದರೆ ಸಾದಾ ಅಂಚೆಯಿಂದ ೪ ರೂ. ರಜಿಸ್ಟರ ಅಂಚೆಯಿಂದ ೫ ರೂ. ಈ ವರುಷವೂ ಮೊದಲಿನಂತೆಯೇ ಆರುನೂರು ಪುಟದ ಸಾಹಿತ್ಯವನ್ನು ಒದಗಿಸುತ್ತೇವೆ ಬಿಳಿ ಕಾಗದದಲ್ಲಿ ಆದಷ್ಟು ಸುಂದರವಾಗಿ ಪುಸ್ತಕ ಮುದ್ರಿಸುವ ಯತ್ನವಿದೆ. ಓದುಗರು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಪ್ರೋತ್ಸಾಹ ನೀಡಿದಂತೆ ಇವೆಲ್ಲಾ ಕೈಗೂಡಬೇಕು. ನಮ್ಮ ಜನ ಎಂದಿನಂತೆ ಇನ್ನು ಮುಂದೆಯೂ ನಮ್ಮ ಪ್ರಕಟನೆಗಳನ್ನು ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸಿದ್ದೇವೆ.

ಆರಂಭದ ಈ ಪುಸ್ತಕ ಗಾತ್ರದಲ್ಲಿ ಬಹಳ ಚಿಕ್ಕದಾಯಿತು. ಮುಂದಿನ ಪುಸ್ತಕಗಳಲ್ಲಿ ಈ ಕೊರತೆ ತುಂಬಿ ಕೂಡುವ ಭರವಸೆ ಕೊಡುತ್ತೇವೆ.

ಈ ಪುಸ್ತಕದಲ್ಲಿ ಬಂದಿರುವ 'ಗೌರಮ್ಮ' 'ಜಯಂತಿ'ಯಲ್ಲಿ, 'ಕುಲಕರ್ಣಿ ಶ್ರೀನಿವಾಸ' 'ವಾಣಿ' ಯಲ್ಲಿ, 'ಪೋತದಾರ ಶ್ರೀನಿವಾಸರಾಯರು' 'ಸಂಜಯ'ದಲ್ಲಿ, 'ಸೌ. ಶ್ಯಾಮಲಾದೇವಿ' 'ಉಷಾ'ದಲ್ಲಿ ಈ ಮುಂಚೆ ಬೆಳಕು ಕಂಡಿವೆ 'ಶಿವರಾಮ ಕಾರಂತ' ಈ ಪುಸ್ತಕದ ಜತೆಗೇ ಪ್ರಕಟವಾಗಲಿರುವ 'ಉಷಾ' ಪತ್ರಿಕೆಯ ದಸರಾ ಸಂಚಿಕೆಯಲ್ಲಿ ಪ್ರಕಟವಾಗುತ್ತಲಿದೆ. ಈ ಪತ್ರಿಕೆಗಳ ಸಂಪಾದಕ ಮಹಾಶಯರಿಗೆ ನಮ್ಮ ವಂದನೆಗಳು

ಮುಂದಿನ ಕುಡಿಯನ್ನು ಡಿಸೆಂಬರದಲ್ಲಿ ಮದರಾಸಿನಲ್ಲಿ ನೆರೆಯುವ ಸಾಹಿತ್ಯ ಸಮ್ಮೇಳನದ ಹೊತ್ತಿಗೆ ಒದಗಿಸಿಕೊಡುತ್ತೇವೆ.

ಈ ಪುಸ್ತಕದ ಹೊದಿಕೆಗೆ ಸುಂದರವಾದ ಚಿತ್ರ ಬರೆದುಕೊಟ್ಟ ಶ್ರೀ ಶಿಗ್ಗಾಂವಿ, ಹಾಗೂ ಶ್ರೀ. ಉಪಾಧ್ಯೆ ಇವರಿಗೆ ವಂದನೆಗಳು.

ಧಾರವಾಡ
೧೬-೧೦-೪೫

ಸಂಪಾದಕ
**ಲಲಿತ ಸಾಹಿತ್ಯಮಾಲೆ**

# ಮುನ್ನುಡಿ

ಕನ್ನಡದ ಜನಜೀವನದಲ್ಲಿ ಒಂದಲ್ಲ ಒಂದು ಬಗೆಯಿಂದ ಪರಿಣಾಮ ಮಾಡಿದ ಆರು ಪ್ರಸಿದ್ಧ ವ್ಯಕ್ತಿಗಳನ್ನು ಹಕ್ಕಿನೋಟದಿಂದ ನೋಡಿ ನನ್ನ ಗೆಳೆಯ ದತ್ತ ಕುಲಕರ್ಣಿ ತಾವು ತೆಗೆದ ಚಿತ್ರವನ್ನು ಓದುಗರ ಮುಂದಿರಿಸಿದ್ದಾರೆ. ಈ ಆರೂ ಜನರು ತಮ್ಮ ಕೃತಿಗಳಿಂದ ಅಥವಾ ಕಲೆಯಿಂದ ಕನ್ನಡಿಗರಿಗೆ ಪರಿಚಿತರಾದವರೆ. ಆದರೆ ಅವರ ವ್ಯಕ್ತಿತ್ವದ ಪರಿಚಯ, ಅವರ ಬಾಳಿನ ರೂಪರೇಷೆ ಅವರವರ ಕೃತಿಗಳಲ್ಲಿ ಮೂಡುವದು ಸಾಧ್ಯವಿಲ್ಲ. ಅವರ ನೈಜ ಪರಿಚಯವನ್ನು ಮುಖತಃ ಅಥವಾ ಸಂಪರ್ಕದಿಂದ ಮಾಡಿಕೊಳ್ಳುವದು ಎಲ್ಲರಿಗೂ ಒದಗುವ ಭಾಗ್ಯವಲ್ಲ. ಆದರೂ ಅಂಥ ಪ್ರಸಿದ್ಧ ವ್ಯಕ್ತಿಗಳ ಬಗೆಗೆ ಎಲ್ಲರೂ ಕುತೂಹಲ ತಳೆದಿರುವದು ಸ್ವಾಭಾವಿಕವೆ. ಆ ಕುತೂಹಲವನ್ನು ಕೆಲಮಟ್ಟಿಗೆ ನಿವಾರಿಸುವದು "ಹಕ್ಕಿ ನೋಟ"ದ ಉದ್ದೇಶ. ವ್ಯಕ್ತಿ ಪರಿಚಯವೆಂಬ ಸಾಹಿತ್ಯ ಪ್ರಕಾರದ ಉದ್ಭವಕ್ಕೂ ಇದೇ ಪ್ರೇರಣೆಯಿತ್ತಿರಬೇಕೆಂದು ನನ್ನ ನಂಬಿಕೆ.

ವ್ಯಕ್ತಿಚಿತ್ರಣವೆಂದರೆ ಜೀವನ ಚರಿತ್ರೆಯಲ್ಲ; ಅಥವಾ ಒಂದು ವ್ಯಕ್ತಿಯ ಗುಣದೋಷಗಳನ್ನು ತೂಗಿ ತೀರ್ಪು ಕೊಡುವ ವಿಮರ್ಶೆಯೂ ಅಲ್ಲ. ಇಲ್ಲಿ ಮಹತ್ವವಿರುವುದು ವ್ಯಕ್ತಿಯ ಜೀವನದ ಘಟನೆಗಳು, ಅವುಗಳ ದಿನಕ್ರಮಾ-ಗತ ವಿವರಣೆ ಇವುಗಳಿಗಲ್ಲ. ವ್ಯಕ್ತಿಯ ವ್ಯಕ್ತಿತ್ವದ, ಸ್ವಭಾವದ ವೈಶಿಷ್ಟ್ಯ ವನ್ನು ನಾಲ್ಕು ಶಬ್ದಗಳಲ್ಲಿ ಹೇಳಿಬಿಡುವದು ವ್ಯಕ್ತಿಪರಿಚಯಕಾರನ ಕೆಲಸ. ಇದನ್ನು ಸಾಧಿಸಲು ಅವನು ಕೆಲವೊಂದು ಸನ್ನಿವೇಶಗಳನ್ನು, ಕೆಲವೊಂದು ನೆನಹುಗಳನ್ನು, ನೆರವಿಗೆ ತೆಗೆದುಕೊಂಡು ತನ್ನ ಲೇಖನಿಗೆ ಸ್ವಾರಸ್ಯದ ಒಪ್ಪ ವನ್ನು ಕೊಡುತ್ತಾನೆ. ಅನವಶ್ಯಕ ವಿವರಗಳನ್ನು ಉಲ್ಲೇಖಿಸಿ ಪುಟ ಬೆಳೆಸುವ ಗೊಡವೆಗೆ ಅವನು ಹೋಗಲೊಪ್ಪುವದಿಲ್ಲ. ಒಂದು ಮಾತಿನಲ್ಲಿ, ಅವನದು ಆಶು-ರೇಖಾಚಿತ್ರಕಾರನ ಕಲೆ. ಕೆಲವೊಂದು ಸೀಸದ ಗೆರೆಗಳಲ್ಲಿ ಅವಸರ ಅವ ಸರವಾಗಿ ಆಶು ಚಿತ್ರಕಾರನ ಕೆಲಸ ಮುಗಿಯುತ್ತದೆ. ಆದರೆ ಅದು ಇಂಥವ-ನದೇ ಚಿತ್ರವೆಂದು ಒಡನೆ ಗುರುತು ಹತ್ತಬೇಕು. ಹಿಟ್ಲರನ ಆಶುಚಿತ್ರ ಬರೆಯುವವನು ಅವನ ಹುಬ್ಬಿನ ವರೆಗೆ ಇಳಿದ ನೀಟಕೂದಲನ್ನು ಮರೆಯ ಲಾರ. ಅವನ ತುಂಬಿ–ಮೀಸೆಗೂ ಸ್ಥಾನವೀಯಬೇಕಾದುದೆ. ಇದಲ್ಲದೆ ವಿಶೇಷ ವಿವರಗಳನ್ನು ಅವನು ಗಮನಿಸುವದಿಲ್ಲ.

ಇಲ್ಲಿ ಬಂದಿರುವ ಆರೂ ನೋಟಗಳು ವ್ಯಕ್ತಿಚಿತ್ರಣದ ತಂತ್ರಕ್ಕೆ ಒಳ-ಪಟ್ಟಿವೆಯೆನ್ನಬರುವದಿಲ್ಲ. ಲೇಖಕರು ಹಾಗೆ ನಟಿಸುವದೂ ಇಲ್ಲ. ಪ್ರಸಂಗ ವಶಾತ್ ಒಮ್ಮೆ ಅವರು ನನ್ನೊಡನೆ ಹೇಳಿದ್ದು, ಒಬ್ಬ ಮನುಷ್ಯನ ಪರಿಚಯ ನಿಕಟತರವಾದಷ್ಟು ಅವನ ವ್ಯಕ್ತಿಪರಿಚಯ ಬರೆಯುವದು ಕಷ್ಟವಾಗುತ್ತ ಹೋಗುತ್ತದೆ. ಅದು ನಿಜವಿರಬೇಕು ಏಕೆಂದರೆ, ಅತಿ ಪರಿಚಯದಿಂದ ಆ ಪರಿಚಯದ ಎಲ್ಲ ಅನುಭವಗಳನ್ನು ಲೇಖನದಲ್ಲಿ ತುರುಕುವ ಚಪಲ ಉಂಟಾಗುತ್ತದೆ. ಮಾತ್ರವಲ್ಲ, ವ್ಯಕ್ತಿಯ ಬಗ್ಗೆ ಒಂದು ವಿಧವಾದ ನಿರ್ದಿಷ್ಟ ಆದರ ಅಥವಾ ಅವಜ್ಞೆ ಉತ್ಪನ್ನವಾಗಿಬಿಡುವುದರಿಂದ ಗುಣದೋಷ ನಿರ್ಣ ಯದ ಚಪಲವೂ ಆವರಿಸಲೆಡೆಯುಂಟು. ಶ್ರೀ. ಬೇಂದ್ರೆ, ಶ್ರೀ. ಕುಲಕರ್ಣಿ ಶ್ರೀನಿವಾಸ ಇವರನ್ನು ಕುರಿತ ಲೇಖನಗಳಲ್ಲಿ ಇಂಥ ಅನುಕೂಲಾನುಭೂತಿ ಯನ್ನು ಕಾಣಬಹುದು. ಆದರೂ ಒಟ್ಟಿನ ಮೇಲೆ ತಾವು ಚಿತ್ರಿಸಿದ ವ್ಯಕ್ತಿಗಳ

ಸ್ವಭಾವಕ್ಕೆ ಕನ್ನಡಿ ಹಿಡಿಯುವಲ್ಲಿ ಶ್ರೀ ಕುಲಕರ್ಣಿಯವರಿಗೆ ಸಾಕಷ್ಟು ಯಶಸ್ಸು ದೊರಕಿದೆಯೆಂದೊಪ್ಪಬೇಕು.

ಈ ಸಂಗ್ರಹದ ಕೊನೆಯ "ನೋಟ" ವಾದ " ನಾನು ಕಂಡ ಗೌರಮ್ಮ"ದ ಬಗ್ಗೆ ಒಂದು ಮಾತು ಬರೆಯದೆ ಇರಲಾರೆ. ಅದು ವ್ಯಕ್ತಿಪರಿಚಯವೆಂದು ಹೇಳುವ ಎದೆಗಾರಿಕೆ ನನಗಿಲ್ಲ. ಆದರೆ ಕನ್ನಡ ಗದ್ಯ ಪ್ರಪಂಚದಲ್ಲಿ ಅದಕ್ಕಿಂತ ಹೆಚ್ಚು ಸುಂದರವಾದ ಕೃತಿಗಳು ಹಲವಿಲ್ಲವೆಂದು ಧೈರ್ಯವಾಗಿ ಹೇಳಬಹುದು. ಓದುವವರನ್ನು ಮುಗ್ಧಗೊಳಿಸುವ ಆ ಏನೋ ಒಂದು—ಅಂದರೆ ಹೃದಯ—ಅವರ ಉದ್ದಗಲಕ್ಕೂ ವೇಗದಿಂದ ಸಂಚರಿಸುತ್ತದೆ. " ಕಂಬನಿ "ಯಲ್ಲಿ ಅದು ಮೊದಲ ಬಾರಿ ಬೆಳಕು ಕಂಡಾಗ ಶ್ರೀ ಕುಲಕರ್ಣಿಯವರ ಲೇಖನಿಯ ಭವಿತವ್ಯದ ಬಗ್ಗೆ ನನಗೆ ಅಸಾಧಾರಣವಾದ ನಂಬಿಕೆ ಉಂಟಾಗಿತ್ತು. ಆದರ ಅವರು ನನ್ನ ಆಶೆಯನ್ನು ಸಾರ್ಥಕ ಮಾಡುವಷ್ಟು ಉದ್ಯಮಶೀಲತೆಯನ್ನು ತೋರಿಸಲಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಬರೆಯುವ ಶಕ್ತಿಯಿದ್ದು ವ್ಯವಸಾಯ ಮಾಡದಿರುವದು ನಾಡಿಗೊಂದು ಅಪರಾಧಮಾಡಿದಂತೆ, ಎಂಬ ಮಾತು ಅವರಿಗೆ ಹೊಳೆಯಲಿಲ್ಲೇನೋ. ಈಚೆಗೆ ಅವರು ಬರೆದ ಕಾರಂತರ ವ್ಯಕ್ತಿಚಿತ್ರ ನನ್ನಲ್ಲಿ ಈ ಆಶೆಯನ್ನು ಮತ್ತೆ ಮೊಳೆಸಿದೆ .. .

ಕುಲಕರ್ಣಿಯವರ ಲೇಖನಿಯ ಮೊದಲ ಬಲವೆಂದರೆ ಅವರ ಸಹೃದಯತೆ. ವ್ಯಕ್ತಿಚಿತ್ರಣಕ್ಕೆ ಬೇಕಾದ ಕಿಡಿಮಾತುಗಳ ಸರಳ ಶೈಲಿ ಅವರಿಗೆ ಮೈಗೂಡಿದೆ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಬೆಳಗುತಿರುವವರಲ್ಲಿ ಹೆಚ್ಚಿನವರ ವೈಯಕ್ತಿಕ ಪರಿಚಯವೂ ಅವರಿಗಿದೆ. ಅವರು ನಿಜವಾಗಿ ಉತ್ತಮ ವ್ಯಕ್ತಿಪರಿಚಯಗಳ ದೊಡ್ಡ ಸಂಗ್ರಹವನ್ನು ಇಷ್ಟರಲ್ಲೆ ಕೊಡಬೇಕಾಗಿತ್ತು; ಕೊಡಲಿಲ್ಲ. ಆದರೆ " It is never too late to mend ". ಇನ್ನಾದರೂ ಲೇಖನಿಗೆ ದೀರ್ಘ ವಿಶ್ರಾಂತಿ ಕೊಡುವದನ್ನು ಬಿಟ್ಟು ಅವರು ತಮ್ಮ ತಪ್ಪನ್ನು ತಿದ್ದಿಕೊಳ್ಳುವರೆಂದು ಹಾರೈಸುವೆ.

ಹುಬ್ಬಳ್ಳಿ
೯-೧೦-೪೫

**ಸಾಡಿಗಾರು ವೆಂಕಟರಮಣಾಚಾರ**

*

# ನಿವೇದನ

ಹತ್ತುವರುಷಗಳಿಂದ ನಾನು ಸಾಹಿತ್ಯದ ನೆಳಲಲ್ಲಿ, ಸಾಹಿತಿಗಳ ನೆರೆಯಲ್ಲಿ ಕಳೆದ ದಿನಗಳ ಕುರುಹು—ಈ ಪುಸ್ತಕ.

ಆರೇಳು ವರುಷಗಳಲ್ಲಿ ಆಗಾಗ ಬರೆದ ಆರು ಲೇಖನಗಳನ್ನು ಇಲ್ಲಿ ಒಂದೆಡೆಗೆ ಕೂಡಿಸಿದ್ದೇನೆ. ಇವುಗಳನ್ನು ಬರೆದ ಕಾಲಕ್ರಮ ಪ್ರಕಟನೆಯ ಹೊಂದಿಕೆಯಲ್ಲಿ ತಿರುವು-ಮುರುವಾಗಿದೆ. ಅಂದರೆ 'ಗೌರಮ್ಮ' ಬರೆದದ್ದು ಆರಂಭದಲ್ಲಿ; ಆದು ಇಲ್ಲಿ ಕೊನೆಯಲ್ಲಿದೆ. ಈಚೆಗೆ ಬರೆದ ಕಾರಂತರ ವ್ಯಕ್ತಿಚಿತ್ರ ಮೊದಲಲ್ಲಿದೆ.

ಇವುಗಳನ್ನೆಲ್ಲ ನಾನು ಸ್ವಯಂಸ್ಫೂರ್ತಿಯಿಂದ ಬರೆದಿದ್ದೇನೆಂದು ಹೇಳಲಾರೆ. ಬರೆಯಲು ಇಲ್ಲಿನ ವ್ಯಕ್ತಿಗಳು ಕಾರಣರಾದಂತೆ ನಾನು ಬರೆಯಬೇಕೆಂದು ಪ್ರೇರಿಸಿದ ಹಿರಿಯರ, ಗೆಳೆಯರ ಪ್ರೀತಿಯೂ ಬಹು ಮಟ್ಟಿಗೆ ಕಾರಣವಾಗಿವೆ. ಈ ಹಿರಿಯರಿಗೆ, ಗೆಳೆಯರಿಗೆ ನನ್ನ ವಂದನೆಗಳು.

'ವ್ಯಕ್ತಿಚಿತ್ರ'ಗಳ ಸಾಹಿತ್ಯರೂಪದ ಬಗ್ಗೆ ಹೇಳಬೇಕಾದರೆ ನಮಗೆ ಅದು ಅಷ್ಟು ಹೊಸದಲ್ಲ, ಹಳೆಯದೂ ಆಗಿಲ್ಲ. ಇಲ್ಲಿನ ಎಲ್ಲಾ ಲೇಖನಗಳು ವ್ಯಕ್ತಿಚಿತ್ರದ ತಂತ್ರಕ್ಕೆ ಒಳಪಡದೆ ಇದ್ದಿರಬಹುದು. ಇಲ್ಲಿನ ವ್ಯಕ್ತಿಗಳು, ಅವರೊಡನೆ ನನಗೆ ಬಂದ ಸಂಬಂಧ ಇವುಗಳ ಮೇಲೆ ಈ ಲೇಖನಗಳು ರೂಪುಗೊಂಡಿದೆ. ಈ ವ್ಯಕ್ತಿಗಳ ಸಮಗ್ರದರ್ಶನ ಮಾಡಿಸುವುದೂ ನನ್ನ ಉದ್ದೇಶವಲ್ಲ. ನಾನು ಕಂಡಂತೆ ಇವೆಲ್ಲ ಒಂದು 'ಹಕ್ಕಿನೋಟ' ಮಾತ್ರ. ಬರೆಹದ ರೀತಿಯಲ್ಲಿ ನಾನು ಯಾರೊಬ್ಬರ ಪ್ರಭಾವಕ್ಕೆ ಒಳಗಾಗಿಲ್ಲವೆಂದೂ ಹೇಳಲಾರೆ. ಕನ್ನಡದಲ್ಲಿ ವ್ಯಕ್ತಿಚಿತ್ರಕಲೆ ಸಾಹಿತ್ಯವಾದದ್ದು ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮರ ಲೇಖನ ಕೌಶಲದಿಂದ. ನನಗೆ ಅವರು ನೆರೆಯ ಸೋದರರಾಗಿದ್ದಾರೆ. ಇಂಥವರ ಕೃತಿಗಳ ಪ್ರಭಾವ ಈ ಲೇಖನಗಳ ಮೇಲಾಗಿದೆಯೆಂದರೆ ನನಗೆ ಅದು ಸಂತೋಷವೇ.

'ನಾನು ಕಂಡ ಗೌರಮ್ಮ' ಗೌರಮ್ಮನವರು ತೀರಿಕೊಂಡ ಸುದ್ದಿ ಬಂದಾಗಲೇ ಬರೆದದ್ದು. ಅದು 'ಜಯಂತಿ'ಯಲ್ಲಿ ಮೊದಲು ಬೆಳಕುಕಂಡಿತು. ಆಗ ನಮ್ಮ ಜನ ಆ ಲೇಖನದ ಕಲೆಯ ಬಗ್ಗೆ ತೋರಿದ ಮೆಚ್ಚಿಗೆಯನ್ನು ನಾನು ಮರೆಯುವಂತಿಲ್ಲ. ಬರೆದ ಒಂದೇ ಒಂದು ಲೇಖನಕ್ಕೆ ಈ ಪರಿಯ ಸ್ವಾಗತ

ಇನ್ನು ಯಾರಿಗೆ ಸಿಕ್ಕಿದೆ? ಎಂದು ನನ್ನ ಒಬ್ಬ ಸ್ನೇಹಿತರು ಕೇಳಿದ್ದರು. ಮುಂದೆ ಅದನ್ನು ಗೌರಮ್ಮನವರ ಕಥಾಸಂಗ್ರಹವಾದ 'ಕಂಬನಿ'ಯಲ್ಲಿ ಪರಿಚಯ ಲೇಖನವಾಗಿ ಸೇರಿಸಿದೆ. ಈಚೆಗೆ ನನ್ನ ಸ್ನೇಹಿತರಾದ ಶ್ರೀ. ಎನ್. ಎಸ್. ಗದಗಕರ, ಬಿ. ಎ. ಅವರು ಅದನ್ನು ಇಂಗ್ಲಿಷಿಗೆ ಅನುವಾದಮಾಡಿದ್ದಾರೆ. ಅದು 'Triveni' ಯಲ್ಲಿ ಬರಲಿದೆ.

ಹಾಗೇ ಸೌ. ಶ್ಯಾಮಲಾದೇವಿ ಮತ್ತು ಪೋತದಾರ ಶ್ರೀನಿವಾಸರಾಯರು ಇವರನ್ನು ಕುರಿತು ಬರೆದ ಲೇಖನಗಳು ಅವರು ಅಕಾಲಮೃತ್ಯುವಿಗೆ ತುತ್ತಾದ ಸಂದರ್ಭದಲ್ಲಿ ಬರೆದವುಗಳು. ಕುಲಕರ್ಣಿ ಶ್ರೀನಿವಾಸ, ಶಿವರಾಮ ಕಾರಂತ ಇವರನ್ನು ಕುರಿತು ಬರೆದ ಲೇಖನಗಳು ನನಗೆ ಆ ವ್ಯಕ್ತಿಗಳೊಡನೆ ಇದ್ದ ಸ್ನೇಹ, ಆದರದ ಗುರುತಾಗಿ ರೂಪುಗೊಂಡಿವೆ. "ಬೇಂದ್ರೆಯವರ ಮಾತುಕತೆ" ಈ ಲೇಖನ 'ಬೇಂದ್ರೆ ಸತ್ಕಾರ ಸಮಿತಿ'ಯ ಪ್ರಕಟನ ಶಾಖೆಯವರ ಸೂಚನೆಯಂತೆ ಬರೆದದ್ದು. ಶ್ರೀ. ಬೇಂದ್ರೆಯವರನ್ನು ಕುರಿತ ಆ ಗ್ರಂಥ ಹೊರಡುವ ಮುಂಚೆ ಈ ಲೇಖನಕ್ಕೆ ಇಲ್ಲಿ ಪ್ರಕಟನಯೋಗವೊದಗಿದೆ.

ನನ್ನ ಲೇಖನಗಳು ಪುಸ್ತಕರೂಪದಲ್ಲಿ ಪ್ರಕಟವಾಗುತ್ತಿರುವುದು ಇದೇ ಮೊದಲು. ನನ್ನ ಲೇಖನಿ ಮೂಡತೊಡಗಿದ್ದು 'ನಾನು ಕಂಡ ಗೌರಮ್ಮ' ಬರೆಯುವುದರ ಮೂಲಕ ಒಂದು ವಿಧದಿಂದ ನನ್ನ ಬರವಣಿಗೆಗೆ ದಿವಂಗತ ಸೌ. ಗೌರಮ್ಮನವರು ಕಾರಣರಾದ ಹಾಗಾಯಿತು. ಆದುದರಿಂದ ಈ ಲೇಖನಗುಚ್ಛವನ್ನು ಅವರಿಗೆ ಸಮರ್ಪಿಸಿದ್ದೇನೆ.

ಈ ಪುಸ್ತಕಕ್ಕೆ ಮುನ್ನುಡಿ ಬರೆದು ಗ| ವೆಂಕಟರಮಣ ಆಚಾರ್ಯರು ನನ್ನನ್ನು ಕನ್ನಡ ವಾಚಕಲೋಕದ ಮುಂದೆ ನಿಲ್ಲಿಸಿದ್ದಾರೆ. ನಾನು ಹೆಚ್ಚಾಗಿ ಬರೆಯದೇ 'ನಾಡಿಗೆ ಅಪರಾಧ ಮಾಡಿದ' ತಪ್ಪು ಸೂಚಿಸಿದ್ದಾರೆ. ಹಿಂದೆ ಆದದ್ದಾಯಿತು. ಮುಂದೆ ನಾನು ಬರೆಯುವುದು ನಮ್ಮ ಜನ ಈ ಪುಸ್ತಕವನ್ನು ಸ್ವಾಗತಿಸುವುದರ ಮೇಲೆ ಅವಲಂಬಿಸಿದೆಯೆಂದು ಹೇಳಬಹುದೇ ..? ಮುನ್ನುಡಿ ನುಡಿದ ಶ್ರೀ. ವೆಂಕಟರಮಣ ಆಚಾರ್ಯರಿಗೆ ನನ್ನ ವಂದನೆಗಳು.

ವಿಜಯದಶಮಿ<br>೧೬–೧೦–೪೫<br>ಧಾರವಾಡ

**ದತ್ತಾತ್ರೇಯ ಕುಲಕರಣಿ**

ನನ್ನ

ಲೇಖನ ಕಲೆಗೆ

ಕಾ ರ ಣ ರಾ ದ

ಅಗಲಿದ ಸೋದರಿ

ಶ್ರೀಮತಿ ಗೌರಮ್ಮನವರಿಗೆ

## ಸೂಚಿ


೧ ಶಿವರಾಮ ಕಾರಂತ

೨. ಬೇಂದ್ರೆಯವರ ಮಾತುಕತೆ

೩. ಪೋತದಾರ ಶ್ರೀನಿವಾಸರಾಯರು

೪. ಸೌ. ಶ್ಯಾಮಲಾದೇವಿ

೫. ಕುಲಕರಣಿ ಶ್ರೀನಿವಾಸ

೬ ನಾನು ಕಂಡ ಗೌರಮ್ಮ


ತಾವು ಜನಿಸಿದ ದೇಶಗಳ ಅಮೌಲ್ಯ ರತ್ನಗಳೆನಿಸಿದ ಕವಿಗಳನ್ನೂ ಕಲಾವಿದರನ್ನೂ ಅವರ ಜೀವಿತಕಾಲದಲ್ಲಿ ಜನರು ಹೇಗೆ ನಡಸಿಕೊಂಡರೆಂಬ ಕರುಣಾಜನಕವಾದ ಇತಿಹಾಸವನ್ನು ಬರೆಯಲು ಯಾರಾದರೂ ಪ್ರಯತ್ನಿಸಬೇಕೆಂದು ನಾನು ಬಯಸುತ್ತೇನೆ. ಎಲ್ಲ ದೇಶಗಳಲ್ಲಿ ಮತ್ತು ಎಲ್ಲ ಕಾಲದಲ್ಲಿ ನೀಚವೂ ತಿರಸ್ಕೃತವೂ ಆದುದರೊಂದಿಗೆ ಉತ್ತಮವೂ ಶ್ರೇಷ್ಠವೂ ಆದುದು ಹೇಗೆ ಎಡಬಿಡದೆ ಹೋರಾಡಬೇಕಾಯಿತೆಂಬುದನ್ನು ಅಂತಹ ಇತಿಹಾಸವು ತೋರಿಸಬಹುದು.”

—ಶೋಪನಹೌರ

# ಶಿವರಾಮ ಕಾರಂತ

"ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ"

ಪ್ರೊ. ಗೋಕಾಕರ ಇಂಗ್ಲೆಂಡಿನ ಪ್ರಯಾಣದಲ್ಲಿ ಒಬ್ಬ ವಿದೇಶೀ ಪ್ರವಾಸಿ 'ನಿಮಗೆ ಕಾರಂತರ ಪರಿಚಯವಿದೆಯೇ' ಎಂದು ಕೇಳಿದರಂತೆ! ಕನ್ನಡ ವಾಚಕಲೋಕದಲ್ಲಂತೂ ಕಾರಂತರನ್ನು ಕಾಣದವರು ಅಪರೂಪ ನಮ್ಮ ನಾಡಿನಲ್ಲಿ ಅವರು ಸುತ್ತದ ಮೂಲೆಯಿಲ್ಲ. ಭಾರತದ ಉದ್ದಗಲವನ್ನೆಲ್ಲಾ ಅಳೆದಿದ್ದಾರೆ. ಮೊಳಕೈವರೆಗೆ ಒಂದು ಅಂಗಿ, ಅರೆ[illegible] ಒಂದು ಚುಂಗುಪಂಚೆ. ಜಾಕೀಟು ಒಂದಿದ್ದರೆ ಇತ್ತು—ಇಲ್ಲದಿದ್ದರೆ ಇಲ್ಲ. ಹೆಗಲಮೇಲೊಂದು ಬೈರಾಸು (ಟವೆಲ್). ತಲೆತುಂಬ ಕೂದಲು ಕೆದರಿಕೊಂಡು ಹೊರಟರೆ ಮುಂಬೈಗೆಂದು ಹೊರಟು ಕಲಕತ್ತೆಗಾಗಿ ಮದರಾಸು ಹಾದು ಮಂಗಳೂರಿಗೆ ಬರುತ್ತಾರೆ. ಏನು ಕೆಲಸವೋ-ಸದಾ ಸಂಚಾರಿಜೀವ.

ಕೆಲವು ವರುಷಗಳ ಹಿಂದೆ ಕಾರಂತರು ಗಡ್ಡಬೆಳಸಿ ಬ್ರಹ್ಮಚರ್ಯದ ಬೆನ್ನುಹತ್ತಿ ತಿರುಗುತ್ತಿದ್ದಕಾಲದಲ್ಲಿ ಒಮ್ಮೆ ವಿಜಾಪುರದ ಗೋಳಗುಮ್ಮಟದ ಮುಂದೆ ಕುಳಿತಿದ್ದರಂತೆ. ಹುಬ್ಬಳ್ಳಿಯ 'ಜ್ಞಾನಭಿಕ್ಷು' ಒಬ್ಬರು ದೇವರನ್ನು ತೋರಿಸೆಂದು ಕಂಡವರನ್ನು ಕೇಳುತ್ತಿದ್ದ ಕಾಲ. ಅವರು ಗೋಳಗುಮ್ಮಟದ ಹತ್ತಿರ ಕಾರಂತರನ್ನು ಕಂಡರು. ಒಳ್ಳೇ [illegible] ಈ ಗಡ್ಡದ ಸಾಧುವನ್ನು ನೋಡಿ ಇವರಿಗೂ ದೇವರನ್ನು ತೋರಿಸೆಂದು ಗಂಟುಬಿದ್ದರು 'ದೇವರಿಲ್ಲದ ಜಗತ್ತಿನ' ಈ ಗಡ್ಡಮಾತ್ರದ ಸನ್ಯಾಸಿಗೆ ದಿಗಿಲಾಯಿತು. ತನ್ನ ಗಡ್ಡವೇ ಈ ಈ ಅನಾಹುತಕ್ಕೆ ಮೂಲವೆಂದರಿತು ಅಂದೇ ಗಡ್ಡ ತೆಗಿಸಿದರು. ಜ್ಞಾನಭಿಕ್ಷುವಿಗೆ ಸ್ನೇಹಭಿಕ್ಷೆ ನೀಡಿದರು.

ಈ ತಿರುಗಲ ತಿಪ್ಪಜೀವದ ನೆಲೆ ಪುತ್ತೂರಿನ ಬಾಲವನ. ಗ್ರೀಷ್ಮದಲ್ಲಿ ಪುತ್ತೂರಿಗೆ ಹೋಗಿದ್ದೆ. ಆಗ ಬಾಲವನ ಕಟ್ಟುತ್ತಿದ್ದರು ಕಾರಂತರು ಊರಲ್ಲಿದ್ದಿಲ್ಲ. ಎರಡು ದಿನದಲ್ಲಿ ಬರುತ್ತಾರೆಂದು ತಿಳಿದೆ. ಧರ್ಮಸ್ಥಳದ ಕಡೆಗೆ ಎರಡುದಿನ ತಿರುಗಾಡಿಕೊಂಡು ಬಂದರಾಯಿತೆಂದು ಹೊರಟೆ ನಾನು ಬರುವಾಗ ನಾಲ್ಕು ದಿನವಾಗಿತ್ತು. ಕಾರಂತರು ಎರಡು ದಿನಕ್ಕೇ ಬಂದುಬಿಟ್ಟಿದ್ದರು.

ಅವರು ಬರುತ್ತಾರೆಂದದಿನ ಬರುತ್ತಾರೆ; ಹೋಗುತ್ತೇವೆಂದದಿನ ಹೊರಡು ತ್ತಾರೆ. ಅವರ ದಾರಿಯಲ್ಲಿ ಯಾವ ಗ್ರಹಗಳೂ ಅಡ್ಡ ಬರುವದಿಲ್ಲ ಆರು ತಿಂಗಳಿನ ಮುಂಗಡ ಪ್ರವಾಸಪತ್ರಿಕೆ ಸಿದ್ಧವಾಗಿರುತ್ತದೆ ಅವರದು. ಆದರೆ ಅವರು ಪುತ್ತೂರಲ್ಲಿದ್ದರೆ ಮಂಗಳೂರಲ್ಲಿದ್ದಂತೆ; ಮಂಗಳೂರಲ್ಲಿದ್ದರೆ ಪುತ್ತೂ-ರಲ್ಲಿದ್ದಂತೆ. ಮಧ್ಯದಲ್ಲಿ ಬರೇ ಮೂವತ್ತಾರು ಮೈಲು ಅಂತರ; ಅಷ್ಟೇ. ಇವರ ಕೈಯಲ್ಲಿಯ ಗಡಿಯಾರಕ್ಕೆ ಸರಿಯಾಗಿ ಇವರ ಕಾಲು ಓಡುತ್ತದೆ.

ಬಾಲವನ ಕಟ್ಟುತ್ತಿದ್ದರೆಂದೆನಲ್ಲ—ಅದರ ಬಾವಿಗೆ ಮೊದಲು ಸವಳು ನೆಲೆ ಹತ್ತಿತ್ತು. ಕಾರಂತರು ಸ್ವಲ್ಪ ಸಕ್ಕರೆಬೆರಸಿ ಕುಡಿದರಾಯಿತೆಂದರು ಆಗ ರೇಶನ್ ಕಾಲವಲ್ಲ. ಆದರೂ 'ಸಕ್ಕರೆ ನೀರಿಗೆ ಹೊಯ್ದರೆ ಹ್ಯಾಗೆ?' ಎಂದೆ. 'ನೀರು ಉಪ್ಪಾದರೆ ಹ್ಯಾಗೆ' ಎಂದರವರು. ಮತ್ತೊಂದು ಸಲ ಹೋಗು ವಾಗ ನೀರು ಸೀಯಾಗಿತ್ತು. ಈ ಪ್ರಾಣಿ ಸಕ್ಕರೆ ಚೀಲ ಸುರುವಿಸಿರಬೇಕು— ಎಂದು ಕೊಂಡೆ.

ಕಾರಂತರು ಪ್ರಯೋಗಿಸದ ವಿದ್ಯೆಯೇ ಇಲ್ಲ. ಸಿನೆಮಾ ಮಾಡಿದರು. ಅದಿನ್ನೂ ಇವರ ಮನೆಯ ಮೂಲೆಯಲ್ಲಿ ಬಿದ್ದಿದೆ. ಬಾಲವನ ಮೊದಲು ಮಕ್ಕಳ ಶಾಲೆಗೆಂದು ಕಟ್ಟಿದರು. ಒಂದು ಆಟದ ಬಯಲು. ಒಂದು ರಂಗ-ಸ್ಥಳ. ಒಂದು ಪ್ರಾಣಿ ಸಂಗ್ರಹಾಲಯ (ಝೂ) ವೂ ಇತ್ತು. ಹಾವು ಸಾಕಿದ್ದರು. ಪಕ್ಷಿಗಳು ಹಲವು. ಕೋತಿಗಳು ಕೆಲವು. ಒಂದು ಆಟದ ರೈಲು ಇತ್ತು. ಕೆಂಪು ಅಳಿಲೊಂದನ್ನು ಹೆಗಲಮೇಲೆ ಕೂರಿಸಿಕೊಂಡು ಮಂಗಳೂರಿಗೆ ಹೋಗುತ್ತಿದ್ದರಂತೆ. ಮಕ್ಕಳ ಮನೋಭಾವವನ್ನು ಅರಳಿಸುವ ಎಲ್ಲ ಸನ್ನಾಹ ಮಾಡಿದ್ದರು. ಬಾಲವನ ನಿಂತಿತು. ಕಾರಂತರ ಈ ಆಸೆ ಪ್ರಯೋಗದಲ್ಲಿಯೇ ಕಮರಿತು.

ಇದಕ್ಕೂ ಮುಂಚೆ 'ಮಕ್ಕಳ ಕೂಟ' ನಡೆಸಿದರು. ಕನ್ನಡ ಜಿಲ್ಲೆಯ ಶಾಲೆಗಳನ್ನು ನೋಡಿ; ಒಂದು ರಂಗಸ್ಥಳದ ಏರ್ಪಾಟು ಇದ್ದೇ ಇರುತ್ತದೆ. ಶಾಲೆಗಳಲ್ಲಿ ಮಕ್ಕಳ ನಾಟಕ ನಡೆಸಲು ಕಾರಂತರೇ ಪ್ರೇರಕರಾದವರು— ಎನ್ನುತ್ತಾರೆ.

ರಾಯಚೂರು ಸಾಹಿತ್ಯಸಮ್ಮೇಳನದಲ್ಲಿ 'ಮುಕ್ತದ್ವಾರ' ನೃತ್ಯ ನಾಟಕದ ಪ್ರಯೋಗ ನಡೆಯಿತು ಮುಂದೆ ಇವರ 'ನೃತ್ಯ ಕರ್ಣಾಟಕ,

ಮಂಗಳೂರಿನಿಂದ ಮುಂಬಯಿ ವರೆಗೆ ಮಜಲು ಬೆಳಸಿತು. ವಿ. ಸೀ. ಅವರು ಕಾರಂತರನ್ನು ಕಾಲನಟನೆಂದು ಕರೆದು ಹಾಡಿದರು.

> ಮೈಗೆ ಬಣ್ಣ ಬಳಿದುಕೊಂಡು ಕಾಗದಗಳ ಕುಚ್ಚನುಟ್ಟು,
> ಕಾಲಗೆಜ್ಜೆ ಝುಣರೆನುತಿರೆ ಕುಣಿಯುತಾನೆ—
> ಹೊಸತು ಕಾಲಪುರುಷನಿವನು ಕುಣಿಯುತಾನೆ

*  *  *  *  *

ಮೊದಲಿನಿಂದ ಕಾರಂತರು ಕನ್ನಡಲೋಕಕ್ಕೆ ತಮ್ಮ ಲೇಖನಿಯ ಮೂಲಕ ಪರಿಚಿತರು. ಇಂದಿಗೂ ಅದೇ ಅವರ ಬಾಳಬುತ್ತಿ. ಅಂದು 'ವಸಂತ' ದಿಂದ ಇಂದು 'ಮುಗಿದಯುದ್ಧ'ದ ವರೆಗೆ ಅವರ ಲೇಖನಿ ವಜ್ರಕಠಿಣವಾಗಿ ಕುಸುಮಕೋಮಲವಾಗಿ ಆಟವಾಡಿದೆ. ಕಾರಂತರ ಮಾತಿನ ವ್ಯಂಗ್ಯ ಅವರ ಕೃತಿಯಲ್ಲಿ ಯಥಾವತ್ತಾಗಿ ಇಳಿದು ನಾಳಿನ ಜಗತ್ತಿಗಾಗಿ ಉಳಿದಿದೆ. 'ದೇವದೂತರ'ನ್ನು ಬರೆದಕೈ 'ಮರಳಿ ಮಣ್ಣಿಗೆ' ಯನ್ನು ರಚಿಸಬಹುದೆಂದು ಯಾರು ನೆನಸಿದ್ದರು? ಈ ವಿಶ್ವಸಂಚಾರಿಯ ಸಾಹಿತ್ಯ ಕ್ಷೇತ್ರವೆಂದರೆ ಒಂದು ಕನ್ನಡಜಿಲ್ಲೆ. ಆ ಜಿಲ್ಲೆಯ ಜನರ ಬಾಳನ್ನು—ಗೋಳನ್ನು, ಸೊಗಸನ್ನು—ಸೋಜಿಗವನ್ನು, ಅವರ ಆಟ-ಪಾಟಗಳನ್ನು, ಹಾಡು-ಕುಣಿತಗಳನ್ನು ಒಂದೂ ಬಿಡದೆ ವಿಧವಿಧವಾಗಿ ಚಿತ್ರಿಸಿದ್ದಾರೆ, ಇನ್ನೂ ಚಿತ್ರಿಸುತ್ತಾರೆ. ಚಿತ್ರವೆಂದರೆ ಶಬ್ದದಲ್ಲಿ ಜೀವನ ಚಿತ್ರಿಸಿದಂತೆ ರೇಖೆಯಲ್ಲೂ ಚಿತ್ರಿಸುತ್ತಾರೆ. ಛಾಯಾಚಿತ್ರವನ್ನೂ ಚೆನ್ನಾಗಿ ಬಲ್ಲರು. 'ಬಾಲಪ್ರಪಂಚ'ದ ಗೆಯ್ಮೆ ಅವರ ಸಾಹಸಜೀವನದ ಕೀರ್ತಿಸ್ತಂಭ. ವಿಷಯ ಸಂಗ್ರಹವೇನು? ಒಂದು ಸಾಹಿತ್ಯವೆ? ಒಂದು ವಿಜ್ಞಾನವೆ? ಕೈಗಾರಿಕೆಯೆ? ಶಿಲ್ಪವೆ? ಜನಾಂಗ ಚರಿತ್ರೆಯೆ? ಇನ್ನೇನು ಬೇಕು, ಅದೊಂದು ವಿಶ್ವಕೋಶ. ಅದರ ಲ್ಲಿಯ ಚಿತ್ರಸಂಗ್ರಹ ನೋಡಿ—ಕಾರಂತರ ಕೃತಿಗಳೇ ಬಹುಮಟ್ಟಿಗೆ. ಬಾಲ ಪ್ರಪಂಚದ ವಿಷಯ ವಿಸ್ತಾರ ಅವರ ಅಭ್ಯಾಸಬಲದ ಜತೆಗೆ ಸ್ವಪ್ರಯೋಗ ದಿಂದ ಅನುಭವಪಡೆದು ಬರೆದದ್ದೂ ಕೆಲಮಟ್ಟಿಗಿದೆ. ಬಾಲವನದ ಅವರ ಪ್ರಾಣಿಸಂಗ್ರಹಾಲಯ ಇಂಥ ಗರಡಿಗಳಲ್ಲೊಂದು.

ಈಗ ಅವರ ಮನೆಯಲ್ಲಿ ಎರಡು ನಾಯಿಗಳಿವೆ. ನಾಯಿಯೆಂದರೆ ಬೀದಿ ತಿರುಗುವ ಡೊಂಕುಬಾಲದ ಪ್ರಾಣಿಯೊಂದೇ ಲಕ್ಷ್ಯಕ್ಕೆ ಬರುತ್ತದೆ. ಆದರೆ

ಕಾರಂತರ ನಾಯಿ ಹುಲಿಯಾಗಿದೆ. ಕಾರಂತರ ಕುಟುಂಬದ ಊಟದ ವೆಚ್ಚ ದಷ್ಟೆ ನಾಯಿಗಳ ಆಹಾರವೆಚ್ಚ. ನಾಯಿಗಾಗಿ ಎಮ್ಮೆ ಸಾಕಿದ್ದಾರೆ. ರೇಶನ್ ಅವೇ ಬಂದಾಗ ನಾಯಿಗೆ ರೇಶನ್ ಬೇಡಿದರು ಕಾರಂತರು. ರೇಶನ್ ಕೋಶ ದಲ್ಲಿ ನಾಯಿಗೆ ಕಾಳಿಲ್ಲ. ಕಾರಂತರು ಊರನ್ನೇ ಬಿಟ್ಟುಹೋಗುವಷ್ಟು ಮನಸ್ತಾಪ ಮಾಡಿಕೊಂಡರು ನಾಯಿಗೆ ಅಕ್ಕಿ ಇಲ್ಲವೆಂದರೆ ಹೇಗೆ— ಎಂದಿತು ಅವರ ಮನಸ್ಸು. ಹೊತ್ತುಮುಳುಗಿ ಕಾರಂತರ ಮನೆಗೆ ಹೇಳದೆ ಕೇಳದೆ ಯಾರೂ ಹೋಗುವಂತಿಲ್ಲ. ಆ ಅರಣ್ಯವಾಸಕ್ಕೆ ನಾಯಿಯೇ ಭದ್ರ ಕೋಟೆ, ಕಾವಲು.

ಕಾರಂತ ಒರಟು ಪ್ರಾಣಿಯೆಂದು ಕಂಡವರು ಹೇಳುವದುಂಟು. ಒಮ್ಮೆ ಒಬ್ಬ ಮಿತ್ರರು ತಮ್ಮ ಸಂಘದ ಸದಸ್ಯರ ಪರಿಚಯ ಮಾಡಿಕೊಡುತ್ತ "ಇವರು ನಮ್ಮ ಕೋಶಾಧ್ಯಕ್ಷರು" ಎಂದು ಒಬ್ಬರನ್ನು ತೋರಿಸಿದರು. "ಏನು ಶೋಕಾಧ್ಯಕ್ಷರೇ" ಎಂದರು ಕಾರಂತರು. ಇವರ ಪುಸ್ತಕ ಓದಿ ಇವರಲ್ಲಿ ಗೌರವವಿಟ್ಟ ಆ ಮಿತ್ರರ ಆತ್ಮಗೌರವ ಕೆಣಕಿತು. ಅವರು ಇಂದಿಗೂ 'ಕಾರಂತರೆಂದರೆ ನಯವರಿಯದ ಪ್ರಾಣಿ' ಎನ್ನುತ್ತಾರೆ. ಮೇಲು ನೋಟಕ್ಕೆ ಬಾಯಿಮಾತಿಗೆ ಅವರು ಒರಟೇ. ಹಲಸಂಗಿಯ ಮಿತ್ರರಿಗೆ ಹೊಲಸಂಗಿ ಯಾವರೆನ್ನುತ್ತಾರೆ ಕಾರಂತರು. ಇವರ ಇರುವಿಕೆ ಹೇಗೋ ಹಾಗೆ ಮಾತಿ ನಲ್ಲೂ ಅಡಂಬರವಿಲ್ಲ; ಅಲಂಕಾರವಿಲ್ಲ. ಯಾವಾಗಲೂ ವಕ್ರಮಾತು. ಮಾತಿನಲ್ಲಿ ಮಾರ್ದವವಿಲ್ಲವೆಂದಾಕ್ಷಣಕ್ಕೆ ಹೃದಯ ಪರೀಕ್ಷೆಯಾಗಲಿಲ್ಲ. ಬೆಣ್ಣೆ ತುಂಬಿದ ಮಡಿಕೆ ಕಠಿಣವಾಗಿರಬಹುದು. ಅದಕ್ಕೆ ಬಿಸಿಲು ತಾಕಿದರೆ ಒಳ ಗಿನ ಬೆಣ್ಣೆ ಕರಗದಿರುತ್ತದೆಯೆ ? ಕಾರಂತರು ಕಲಾವಿದರೆನ್ನುತ್ತೀರಿ. ಇರು ವಿಕೆಯಲ್ಲಿ ನಯ ಬೇಡವೇ ಎನ್ನಬಹುದು. ನಯ-ವಿನಯದ ಪ್ರದರ್ಶವೇ ಒರಟು ಲಕ್ಷಣವೆಂಬ ಸಿದ್ಧಾಂತ ಕಾರಂತರದು. ಸಂಸ್ಕಾರವುಳ್ಳ ಹೃದಯ, ಕರಗುವ ಮನಸ್ಸಿಗೆ ನಯವಿನಯದ ಆವರಣವೇಕೆ ? ಬಾಳಿನುದ್ದಕ್ಕೂ ಕಷ್ಟ-ನಿಷ್ಠುರಗಳನ್ನೆದುರಿಸಿ ಕಲ್ಲು-ಮುಳ್ಳಿನಲ್ಲೇ ನಡೆದು ದೇಹಕ್ಕೆ ಒರಟುತನ ಕಲಿಸಿದ್ದಾರೆ ಕಾರಂತರು. ಮಾನವಜೀವಕ್ಕೆ ಅನಿವಾರ್ಯವಾಗಿ, ಆಕಸ್ಮಿಕವಾಗಿ, ಉದ್ದೇಶಪೂರ್ವಕವಾಗಿ, ಮನಸ್ಸಿನ ಚಿಲ್ಲರೆತನ–ತೋರಿಕೆಯ ಔದಾರ್ಯದಿಂದಾಗಿ ನಡೆಯುವ ಅನ್ಯಾಯಗಳನ್ನು ಕಂಡುಂಡು ಕೊರಗಿ ಮರುಗಿದ್ದಾರೆ. ಸುಖ,

ದುಃಖ ಓದಿನಿಂದ ನೋಟದಿಂದ ಸಿಕ್ಕುವ ವಸ್ತುಗಳಲ್ಲ. ಕೊಂಡೇನೆಂದರೆ ಪೇಟೆಯ ಮಾಲಲ್ಲ. ಸ್ವಂತವಾಗಿ ಅನುಭವಿಸಿ ಪಡೆದ ಅನುಭವ ಎಷ್ಟು ಕಟು ವಾದರೂ ಅದು ಮಧುರವೇ. ಕಷ್ಟ ಎಷ್ಟಾದರೂ ಅದು ಸುಖದ ಹೆದ್ದಾರಿಯೇ. ಸುಖದ ಸುತ್ತಿನದಾರಿ ಬಳಸಿ ಹೋಗುವದು ಧೀರತೆಯ ಲಕ್ಷಣ ವಲ್ಲ. ಬಿಟ್ಟ ಬಾಣ ಸುತ್ತಿ ಹೋದೀತೇನು? ಅವಕ್ಕೆ ಕೂರಲಗಿನ ರಕ್ಷಣೆ ಯಿರುವಂತೆ ಕಾರಂತರಿಗೆ ಕಷ್ಟ ಸಹಿಷ್ಣುತೆ ಅಭ್ಯಾಸವಾಗಿಹೋಗಿದೆ. ಅವರದು ಕೆಚ್ಚಿನ ಹೃದಯ. ಕಾಸಿ ಪರಿಶುದ್ಧಗೊಂಡ ಕಬ್ಬಿಣದ ಕದಿರು ತೆಗೆದಂತೆ ಅವರ ಮಾತು–ಕೃತಿ.

*"ಜೀವನಕ್ಕೆ ಎರಡು ಮುಖ; ಒಂದು ಸುಖ, ಒಂದು ದುಃಖ" ಈ ಅನುಭವ ಅವರ ಸಾಹಿತ್ಯಸಿದ್ಧಿಗೆ ಕೈಮರ–(ತೋರು ಕಂಬ) ವಾಯಿತು. ಎಂತಲೇ ಅವರ ಕಾದಂಬರಿಯ ಸ್ತ್ರೀ ಪಾತ್ರ ಶಿಲ್ಪ ಆದರ್ಶ ಪ್ರಾಯವಾಯಿತು. 'ಮರಳಿ ಮಣ್ಣಿಗೆ'ಯ ಪಾರೋತಿ, ಸರಸೋತಿ, ನಾಗವೇಣಿ—ಕಾಲದ ಸೆಳತಕ್ಕೆ ಸೋಲದೆ ಪುಟವಿಟ್ಟ ಚಿನ್ನದಂತೆ ಸಹನೆಯಲ್ಲಿ ಸುಟ್ಟು ತಾಳ್ಮೆಯ ಒಪ್ಪಗೊಂಡು ಮಾದರಿಯ ಹೆಣ್ಣುಬಾಳ ಮೆರೆದರು.

* * * * *

"ಮಂಗಳೂರು ಬೆಂಗಳೂರು ಧಾರವಾಡ ಕಾರವಾಡ
ಕನ್ನಡಿಗರ ತಂಡಗಳನು ಕರಸುತ್ತಾನೆ—
ದಾಡಕೆತ್ತು ನಾಳೆಯೊಸಗೆ ಬೀರುತ್ತಾನೆ." —ವಿ. ಸೀ.

ದಸರಾ ಉತ್ಸವ ಪುತ್ತೂರಲ್ಲಿ ಕೆಲವು ವರುಷ ನಡೆಯಿತು, ಅದೊಂದು ಅಪೂರ್ವ ಜ್ಞಾನಸತ್ರವಾಗಿತ್ತು. ಕನ್ನಡನಾಡಿನ 'ಮಾತುಬಲ್ಲ' ವರಿಗೆಲ್ಲ ಆಮಂತ್ರಣ ಬರುತ್ತಿತ್ತು ಒಂಬತ್ತುದಿನ ಉಪನ್ಯಾಸಗಳು ಬಂದ ಜನರಿಂದ. ದಿನಾಲೂ ಮನರಂಜನೆ ಕಾರಂತರಿಂದ. ಪ್ರತಿವರುಷ ಹೊಸ ಪ್ರಯೋಗ. ಒಮ್ಮೆ ಮಾತಿನ ನಾಟಕಗಳಿಂದ ರಂಜಿಸಿದರು. ಮತ್ತೊಮ್ಮೆ ಗೀತನಾಟಕದ ಆಲಾಪನೆ ವಿವಿಧ ಹಾವಭಾವಗಳಿಂದ ನೃತ್ಯನಾಟಕ, ಛಾಯಾನಾಟಕ (Shadow play) ಗಳು ರೂಪುಗೊಂಡವು. ದಕ್ಷಿಣಕನ್ನಡದ ಪರಂಪರೆಯ ಯಕ್ಷಗಾನಗಳೂ ಪ್ರದರ್ಶಿತವಾಗುತ್ತಿದ್ದವು. ಆಗ ಸುತ್ತಲೂ 'ಈ ಸಲ

* ಪೇಜಾವರ ಸದಾಶಿವರಾಯರ ಇಟಲಿಯ ನಾಟ್ಯಗೀತ.

ಪುತ್ತೂರಲ್ಲಿ ಏನು ಹೊಸದು ? ' ಎಂಬ ಸೊಲ್ಲು ಕೇಳುತ್ತಿತ್ತು. ಉಪನ್ಯಾಸಕ್ಕೆ ಬಂದ ಗೆಳೆಯರನ್ನು ಒಂಬತ್ತು ದಿನ ಸತ್ಕರಿಸಿ ಉತ್ಸವ ಮುಗಿದ ಮೇಲೆ ಜಿಲ್ಲೆಯ ಸುಂದರ ಸ್ಥಳಗಳಿಗೆ ಭೆಟ್ಟಿಮಾಡಿಸುತ್ತಿದ್ದರು. ಸಾಹಿತ್ಯಸಮ್ಮೇಳನ ದಷ್ಟೇ—ಅದಕ್ಕೂ ಹೆಚ್ಚು ಆತ್ಮೀಯ ವಾತಾವರಣದಲ್ಲಿ ನಡೆಯುತ್ತಿದ್ದ ಈ ನಾಡಹಬ್ಬ ಕಾರಂತರ ಉತ್ಸಾಹದ, ಸಾಹಿತ್ಯ-ಕಲಾಪ್ರಿಯತೆಯ ಸ್ನೇಹ ಮಯವಾದ ಜೀವನದ ನಿದರ್ಶನವಾಗಿತ್ತು. ಯುದ್ಧ ನಿಂತಿತು. ಮತ್ತೆ ಪುತ್ತೂರಿನಲ್ಲಿ ಈ ಹಬ್ಬದ ಪರಂಪರೆ ನಡೆಯಬಹುದೇ ?

ಮಕ್ಕಳೆಂದರೆ ಕಾರಂತರಿಗೆ ಪ್ರಾಣ. ಅದಕ್ಕೆ ನಿದರ್ಶನ ಅವರ ಮನೆ 'ಬಾಲವನ'ವಾಗಿರುವುದು ದಾರಿಯಲ್ಲಿ ಆಡುವ ಮಗುವನ್ನು ಕಂಡು ಕಾರಂತರು ಎತ್ತಿ ಮುದ್ದಾಡುತ್ತಾರೆ. ಬಾಚಿ ತಬ್ಬಿಕೊಳ್ಳುತ್ತಾರೆ. ಬಾಲಭಾಷೆಯಲ್ಲಿ ಮಕ್ಕಳೊಡನೆ ತೊದಲು ನುಡಿಯುತ್ತಾರೆ. ಮಕ್ಕಳು ಅನಾರೋಗ್ಯದಿಂದಿದ್ದರೆ ಕಾರಂತರು ಬಹಳ ಬೇಸರ ಪಡುತ್ತಾರೆ. ಉಪಾಯ ಸೂಚಿಸುತ್ತಾರೆ. ಮಕ್ಕಳ ಲಾಲನೆ-ಪಾಲನೆಯ ಬಗ್ಗೆ ದೊಡ್ಡ ಯೋಜನೆಯನ್ನೇ ಹೇಳುತ್ತಾರೆ. ಮಕ್ಕಳ ಆಹಾರ-ವಿಹಾರದ ಬಗ್ಗೆ, ಆಟ-ನೋಟಗಳ ಬಗ್ಗೆ ತುಂಬ ಮಾತನಾಡು ತ್ತಾರೆ. ಮಕ್ಕಳು ನಕ್ಕುನಲಿಯಬೇಕು. ಕಾರಂತರು ಹಿಗ್ಗಿ ಹಾಡುತ್ತಾರೆ.

ನನ್ನ ಗೆಳೆಯನೊಬ್ಬ ತನ್ನ ಮಗನನ್ನು ತುಂಬ ದಕ್ಷತೆಯಿಂದ ಅಚ್ಚು ಮೆಚ್ಚಿನಿಂದ ನೋಡಿಕೊಳ್ಳುತ್ತಾನೆ. ನನ್ನ ಮಗು ಕಾಯಿಲೆ ಬಿದ್ದುದನ್ನು ಹೇಳುತ್ತ ಆ ಗೆಳೆಯನ ಮಗು ತಂದೆಯ ರಕ್ಷಣೆಯಲ್ಲಿ ಚೆನ್ನಾಗಿದೆ ಎಂದೆ, ಕಾರಂತರ ಹತ್ತಿರ. ಆ ಗೆಳೆಯ ಕಾರಂತರಿಗೂ ಹತ್ತಿರದವ. ಅವರಿಗೂ ಅವನ ಮನೆಯ ವಿಷಯ ಗೊತ್ತು. ' ಅಷ್ಟು ದಕ್ಷತೆ ಸಾಲದು ' ಎಂದರು ಕಾರಂತರು.

ಇವರಿಗೆ ಒಂದು ಗಂಡು, ಒಂದು ಹೆಣ್ಣು ಸಂತಾನ. ಚೊಚ್ಚಿಲಮಗ ನಿಗೆ **' ಹರ್ಷ '** ಎಂದು ಹೆಸರಿಸಿದ್ದಾರೆ. ಮಕ್ಕಳಲ್ಲಿ ಹರ್ಷ ವರ್ಧಿಸಲೆಂಬ ಸಂಕೇತವೇ ಇದು. ಇವರ ಬಾಲವನ ನಡೆದು ಬಂದಿದ್ದರೆ ' ಹರ್ಷಚಿತ್ತ ಪೀಳಿಗೆ 'ಯನ್ನು ನಾವು ನಿರೀಕ್ಷಿಸಬಹುದಿತ್ತು.

ಒಮ್ಮೆ ಮಾತಾಡುತ್ತ ಕುಳಿತಿದ್ದೆವು. ೧೯೪೨ರ ಘಟನೆಗಳಲ್ಲಿ ಜೇಲಿಗೆ ಹೋದವರ ಒಂದು ಕುಟುಂಬ ಬಹಳ ಕಷ್ಟದಲ್ಲಿದೆಯೆಂದು, ಮಕ್ಕಳ ಪಾಲನೆ

ಅಸಾಧ್ಯವಾಗಿ ಮಕ್ಕಳ ಮಾರಾಟ ನಡೆದಿದೆಯೆಂದು, ಒಂದು ನಿಧಿಯ ಪ್ರಯತ್ನದಲ್ಲಿದ್ದ ದೇಶಭಕ್ತ ಹಿರಿಯರೊಬ್ಬರು 'ನಿನ್ನ ಪಾಲಿನ ಸಹಾಯ ಕೊಡು' ಎಂದು ನನ್ನನ್ನು ಕೇಳಿದರು. ನಾನಿನ್ನೂ ವಿಚಾರದಲ್ಲಿದ್ದೆ. 'ಮಕ್ಕಳ ಮಾರಾಟ' ಇದನ್ನು ಕೇಳದಾದರು ಕಾರಂತರು. ಕಿಸೆಗೆ ಕೈಹಾಕಿ ನಿಲುಕಿದ ಒಂದು ದೊಡ್ಡ ನೋಟನ್ನು ತೆಗೆದುಕೊಟ್ಟರು.

* * * * *

"ಶಿವರಾಮ ಕಾರಂತ ಕಡಲತೀರದ ನಮ್ಮ
ಭಾರ್ಗವ ತಪೋವನದ ಕಲಿ, ಸರ್ವ ದಮನ,

* * * *

ಹಿಂಸ್ರಜೀವಿಗಳಾರು ಈ ನಾಡಿನಲಿತಮ್ಮ
ಕ್ಷುದ್ರತೆಯ ತೆರೆವರವರಿಂಗೆ ನೀನು ಯಮನ
ಮೊಗವ ತೋರುತಲಿರುವೆ........." 'ಶ್ರೀನಿವಾಸ'

ಕಾರಂತರು ವ್ಯಾಪಾರಚತುರರೆನ್ನುವದಕ್ಕಿಂತ ವ್ಯವಹಾರನಿಷ್ಠರೆನ್ನಬಹುದು. ಅವರು ಕೈಕೊಂಡ ಕೆಲಸಗಳೆಷ್ಟೋ ಇನ್ನೂ ಮುಗಿಯದಿವೆ. ಅನೇಕ ಕೆಲಸಗಳ ರುಚಿನೋಡಿಬಿಟ್ಟಿದ್ದಾರೆ. ಇವರ ಕಾರ್ಯನಿಷ್ಠೆಮಾತ್ರ ಸದಾ ಜಾಗ್ರತವಾಗಿದೆ. ಯುದ್ಧಾರಂಭದಲ್ಲಿ ಮಕ್ಕಳಾಟಿಕೆಯ ಕಾರಖಾನೆ ತೆಗೆದರು. ಇವರದು ಕೇವಲ ಪೇಟೆಯ ರುಚಿಯ ಮಾಲನ್ನು ಒದಗಿಸುವ ತಯಾರಿಕೆಯಲ್ಲ. ಜನರ ಅಭಿರುಚಿಯನ್ನು ತಿದ್ದ ಹೊರಟ ಕಲಾಪೂರ್ಣದೃಷ್ಟಿಯ ತಯಾರಿಕೆ. ಅದು ಅಗ್ಗ ದರದಲ್ಲಿ ಹೇಗೆ ನಡೆದೀತು? ಯುದ್ಧಕಾಲದಲ್ಲಿ ಅದು ಬಾಳಿ ಬದುಕುವುದು ಅಸಾಧ್ಯವೆನಿಸಿತು. ನಿಲ್ಲಿಸಿಬಿಟ್ಟರು.

ಈ ಹತ್ತು ಬಗೆಯ ವ್ಯವಹಾರ ನಡೆಸಿದ ಕಾರಂತರು ಅನೇಕ ಬಗೆಯ ವ್ಯಾಪಾರದ ಏಟು ತಿಂದಿದ್ದಾರೆ. ಎಂತಲೇ ತಾತ್ಪೂರ್ತಿಕ ವ್ಯವಸ್ಥೆಯೇ ಇರಲಿ, ಯಾವ ಚಿಕ್ಕಪುಟ್ಟ ವ್ಯವಹಾರವನ್ನೂ ಶಾಸನಬದ್ಧವಾಗಿ ಮಾಡುತ್ತಾರೆ. ಸ್ನೇಹದಲ್ಲಿ ಮೃದುವಾಗಿ ಕಾಣುವ ಕಾರಂತರು ವ್ಯವಹಾರದಲ್ಲಿ ನ್ಯಾಯನಿಷ್ಠುರವಾಗಿಯೇ ವರ್ತಿಸುತ್ತಾರೆ. ಎಂತಲೇ ಇವರು ಕಾರ್ಯಸಾಧನೆಯ ವ್ಯಾಪಾರ ಚತುರರಲ್ಲ—ಕಾರ್ಯನಿಷ್ಠೆಯ ವ್ಯವಹಾರಕುಶಲಿಯೆನ್ನಬಹುದು.

ಮೂಢ ರೂಢಿಗಳನ್ನು ಮಠಗಳಲ್ಲಿಯ ಅನ್ಯಾಯಗಳನ್ನು ಸಮಾಜದ ಮುಂದಾಳುಗಳ ಅಧಿಕಾರ ಲಾಲಸೆಯನ್ನು ತಮ್ಮ ಸಾಹಿತ್ಯರೂಪದಲ್ಲಿ

ಡೊಂಕಾಗಿ, ವ್ಯಂಗ್ಯವಾಗಿ, ಕಟುವಾಗಿ ಟೀಕಿಸಿದ ಕಾರಂತರು ಹಲವರ ಕಣ್ಣಿಗೆ ಅಪಥ್ಯವಾಗಿದ್ದರು. ಇವರು ಮದುವೆಯಾದಾಗ ಮದುವೆಯ ವಿಜಾತಿ ಸಂಬಂಧವನ್ನು ಒಂದು ಪತ್ರಿಕೆ ಟೀಕಿಸಿತು. ಕಾರಂತರು ಈ ಸಲ ಸಾಹಿತ್ಯದ ಅಸ್ತ್ರದಿಂದ ತಿವಿಯದೆ ಮಾನಹಾನಿಯೆಂದು ಕೋರ್ಟಿನ ಕಟ್ಟೆ ಹತ್ತಿದರು. ಪತ್ರಿಕಾಕರ್ತರು ಶಾಸನ ಹೊಂದಬೇಕಾಯಿತು.

* * * * *

ಕಾರಂತರ ಅನೇಕ ಸಾಹಸ ಪ್ರಯೋಗಗಳಲ್ಲಿ ಅವರ ಮದುವೆಯೂ ಒಂದು. ತಮ್ಮ ಹೋರಾಟದ ಜೀವಕ್ಕೆ ವಿಶ್ರಾಂತಿಯ ಆವಶ್ಯಕತೆಯಾದಾಗ ಮದುವೆಯಾದರು. ಮದುವೆಯಾದ ಹೊಸದರಲ್ಲಿ ಮಡದಿಯೊಡನೆ ನಾಡ ಸುತ್ತಿದರು. ಒಂದು ಮೋಟಾರ್ ಕಾರು ಕೊಂಡು ತಿರುಗಾಡಿಬಂದರು ಕಾರು ನಾದುರಸ್ತ ಆಯಿತು. ಅನೇಕ ಅವಯವ ಕಳೆದುಕೊಂಡು ಇವರ ಮದುವೆಯ ಸವಿನೆನಪಾಗಿ ಬಾಲವನದ ಬಾಗಿಲಲ್ಲಿ ನಾಲ್ಕುಗಾಲಿಯ ಮೇಲೆ ಅದು ಮೊನ್ನೆಮೊನ್ನೆಯವರೆಗೂ ನಿಂತಿತ್ತು.

ಶ್ರೀಮತಿ ಲೀಲಾಕಾರಂತರು ಶ್ರೀ ಶಿವರಾಮ ಕಾರಂತರ ಕಲಾಜೀವನದ ನೆರವಿಗೆ ಇವರ ಸಾಹಸ ಜೀವನದ ನೆಳಲಾಗಿ ಬಂದ ಗೆಳತಿ. ಈ ವಿಶ್ವವ್ಯಾಪಿ ವಿಚಾರದ ಮಹಾ ಪುರುಷನನ್ನು ನೋಡಿಕೊಳ್ಳುವವರೊಬ್ಬರು ಬೇಕೆಂದೆನಿಸಿದ ಸಮಯದಲ್ಲಿ ಜೀವನಸಂಗಾತಿಯಾಗಿ ಬಂದ ಶ್ರೀಮತಿ ಲೀಲಾ ಕಾರಂತರು ಶ್ರೀ. ಕಾರಂತರ ಓಡುವ ರಥದ ಇನ್ನೊಂದು ಗಾಲಿಯಾಗಿದ್ದಾರೆ. ಇವರು ಕಾರಂತರ ಜತೆಗೆ ನಾಟ್ಯವಾಡಿದ್ದಾರೆ. ಒಳ್ಳೆಯ ಲೇಖಕಿ. ಇವರೇ ಬರೆದ ಕಾರಂತರ ವ್ಯಕ್ತಿಚಿತ್ರ ('ಕನ್ನಡ ನುಡಿ'ಯಲ್ಲಿ 'ನಾ ಕಂಡ ಕಾರಂತ') ನೋಡಿದರೆ ಪತಿಯನ್ನು ಕಂಡ ಈ ಸತಿಯ ಕಲ್ಪನೆ ಬರುತ್ತದೆ.

೧೯೪೪ರ ಡಿಶೆಂಬರಿನಲ್ಲಿ ಧಾರವಾಡದಲ್ಲಿ ಕರ್ನಾಟಕ ಏಕೀಕರಣ ಪರಿಷತ್ತು ನಡೆಯಿತಷ್ಟೆ. ಸಮ್ಮೇಳನ ಅವಸರದಲ್ಲಿ ಕರೆಯಲಾಗಿತ್ತು. ಯಾರನ್ನು ಅಧ್ಯಕ್ಷರನ್ನಾಗಿ ಆರಿಸಬೇಕೆಂಬ ವಿಚಾರ ನಡೆದಾಗ ಕಾರಂತರ ಸ್ವಾರಿ ಧಾರವಾಡಕ್ಕೆ ದಯಮಾಡಿಸಿತ್ತು. ಅವರಲ್ಲಿ ಈ ಪ್ರಸ್ತಾಪ ಮಾಡಿದಾಗ ಅವರು ಒಬ್ಬರ ಹೆಸರು ಹೇಳಿ ಅವರನ್ನು ತುಂಬ ಶ್ಲಾಘಿಸಿದರು. "ಕಾರಂತರು ಒಂದು ವ್ಯಕ್ತಿಯನ್ನು ಹೀಗೆ ಹೊಗಳಿದ್ದನ್ನು ಅವರ ಇಷ್ಟು

ದಿನದ ಸ್ನೇಹದಲ್ಲಿ ನಾನು ಕಂಡಿರಲಿಲ್ಲ. ಆದ್ದರಿಂದ ಕಾರಂತರು ಸೂಚಿಸಿದ ಈ ವ್ಯಕ್ತಿ ಯಥಾಯೋಗ್ಯವಾದ ವ್ಯಕ್ತಿಯೆಂದು ನಾವು ಗೊತ್ತುವಳಿ ಸ್ವೀಕರಿಸಿ ಶ್ರೀ ಜಿನರಾಜ ಹೆಗಡೆಯವರಿಗೆ ಆಮಂತ್ರಣ ಕಳಿಸಿದೆವು.'' ಎಂದು ಪ್ರೊ. ಜಾಗಿರದಾರರು ಸಮ್ಮೇಳನದ ಸಮಾರೋಪ ಭಾಷಣದಲ್ಲಿ ಹೇಳಿದರು. ಶ್ರೀ. ಜಿನರಾಜರ ಕಣ್ಣಂಚಿನಲ್ಲಿ ನೀರು ತುದುಕಳಿಸಿತು. ಕಾರಂತರಿಂದ ಒಳ್ಳೆಯ ಮಾತು ಆಡಿಸಿಕೊಳ್ಳಲು ಯೋಗ್ಯತೆ ಬೇಕು. ಅದಿಲ್ಲದ ದೈವವನ್ನೂ ಭಾಗ್ಯ ವನ್ನೂ ಅವರು ಒಪ್ಪುವದಿಲ್ಲ.

# ಬೇಂದ್ರೆಯವರ ಮಾತು-ಕತೆ

ಒಮ್ಮೆ ನಾಲ್ವರು ಗೆಳೆಯರು ಕೂಡಿ ಚೀಟಿ ಹಾಕಿ ಆರಿಸಿ ಬಂದ ವಿಷಯದ ಮೇಲೆ ಕವಿತೆ ಬರೆಯುವದೆಂದು ಗೊತ್ತು ಮಾಡಿದೆವು. 'ಹಂಬಲ' ಎಂಬ ವಿಷಯ ಬಂತು—ಎತ್ತಿದ ಚೀಟಿಯಲ್ಲಿ. ಸರಿ; ಸುನೀತ ಬರೆಯ ಬೇಕೆಂದು ಗೊತ್ತಾಯಿತು. ಸಮಯ-ಅರ್ಧಗಂಟೆ.

ಎಲ್ಲರೂ ಬರೆದಾದ ಮೇಲೆ—'ನನ್ನದು ಚೆನ್ನ, ನನ್ನದು ಚೆನ್ನ' ಎಂದು ವಾದ ಬಿತ್ತು. ಈ ಒಳಿತು ಕೆಡುಕಿನ ನ್ಯಾಯಾಧೀಶರು ನಾವು ಯಾರೂ ಆಗುವಂತಿರಲಿಲ್ಲ,—ಯಾಕೆಂದರೆ ಎಲ್ಲರೂ ಬರೆಯುವ ಅಪರಾಧಮಾಡಿದ್ದೆವು. ಬೇಂದ್ರೆಯವರನ್ನು ಕಾಣುವದೆಂದು ಸರ್ವಾನುಮತದಿಂದ ಒಪ್ಪಿಗೆಯಾಯಿತು.

ಕವಿತೆ ಬರೆಯುವದಕ್ಕಿಂತ ಅದರ ಗುಣ ನಿರ್ಣಯದ ಕಡೆಗೆ ನಮ್ಮ ಲಕ್ಷ್ಯ ಹೆಚ್ಚು ವೇಗವಾಗಿ ಓಡಿತು. ಹೊತ್ತು ನೋಡಲಿಲ್ಲ; ಗೊತ್ತು ನೋಡ ಲಿಲ್ಲ. ಓಡಿದೆವು ನಮ್ಮ ಮೆಚ್ಚಿನ ಕವಿ-ಗುರು ಬೇಂದ್ರೆಯವರ ಕಡೆಗೆ.

ನಾವು ಹೋದ ಅಡ್ಡಹೊತ್ತಿನಲ್ಲಿಯೂ ನಮಗೆ ಮುಗುಳುನಗೆಯ ಸ್ವಾಗತ ದೊರೆಯಿತು. ಬೇಂದ್ರೆಯವರ ಮನೆಗೆ 'ಸುಸ್ವಾಗತ'ವೆಂಬ ಹಲಗೆ ನೇತು ಹಾಕಿಲ್ಲ. ಅದರ ಕಾರಣವೇ ಇಲ್ಲ. ಅಲ್ಲಿ ಹೋಗಿ ಬರುವವರಿಗೆಲ್ಲ ಸದಾ ತೆರೆದೆದೆಯ ಸ್ವಾಗತವಿದೆ.

ಕವಿಗೆ ಈ ಸುದ್ದಿ ಹೇಳಿದೆವು. ಅವರೆಂದರು : ಇಲ್ಲೇ ಬರಬೇಕಾಗಿತ್ತು- ನಾನೂ ಕೂಡಿಕೊಳ್ಳುತ್ತಿದ್ದೆ ಎಂದು. ಅವರನ್ನು ಕೂಡಿ ಸ್ಪರ್ಧಿಸುವ ವಿಚಾರ ನಮಗೆ ಯಾರಿಗೂ ಬರಲಾರದು—ಎಂಬುದನ್ನರಿತ ನಾವು ನಮ್ಮ ಕರಡುಗಳನ್ನು ಅವರಿಗೊಪ್ಪಿಸಿದೆವು. ಒಂದೊಂದಾಗಿ ನಮ್ಮಿಂದಲೇ ಓದಿಸಿ ಕೇಳಿ—ಅದರಲ್ಲಿನ ಒಳಿತು ಕೆಡಕುಗಳನ್ನು ನಮ್ಮ ನಮ್ಮ ಬಾಯಿಂದಲೇ ಹೊರಡಿಸಿದರು.

ಆಗ ಶ್ರೀ. ಬೇಂದ್ರೆಯವರು ಸುನೀತ ಕಾವ್ಯದ ಹುಟ್ಟು-ಬೆಳವಣಿಗೆ, ಅದರ ಲಕ್ಷಣಗಳನ್ನು ಉದಾಹರಣೆಗಳಿಂದ ತಿಳಿಸಿ ಹೇಳಿದರು. ಅಡ್ಡಹೊತ್ತು ಹೇಳದೆ ಇಳಿದು ಹೋಗಿತ್ತು.

ಇನ್ನೊಮ್ಮೆ ಬೇಂದ್ರೆಯವರೂ ಸಹ ಇರುವಾಗ 'ಚೀಟಿ-ಕಾವ್ಯ' ಪ್ರಯೋಗ ನಡೆಯಿತು. ಆಗ ಚೀಟಿ ಹಾಕಿ ತೆಗೆದ ಒಂದೇ ಸಾರ್ವತ್ರಿಕ ವಿಷಯದ ಮೇಲೆ ಬರೆಯುವದಾಗಿರಲಿಲ್ಲ. ಹತ್ತು ಜನ ಒಂದೊಂದು ವಿಷಯ ಚೀಟಿಯಲ್ಲಿ ಬರೆದು ಹಾಕುವುದು; ಒಬ್ಬೊಬ್ಬರು ಒಂದೊಂದು ಎತ್ತಿಕೊಳ್ಳು ವುದು. ತಮತಮಗೆ ಬಂದ ವಿಷಯದ ಮೇಲೆ ಬರೆಯುವುದು. ಇಂಥದೇ ಛಂದ ಎಂದಿರಲಿಲ್ಲ. ವಿಷಯ ವೈವಿಧ್ಯದಂತೆ ಪ್ರಕಾರವು ಬೇರೆ ಬೇರೆಯಾಗಿ ರಲಿ—ಎಂದರು ಬೇಂದ್ರೆಯವರು. ಅಂದಿನ ಬರಹಗಾರರಲ್ಲಿ ನುರಿತವರೂ ಕೆಲವರಿದ್ದರು. ಆದರೆ ಅಂದು ನಿರ್ದಿಷ್ಟ ಅವಧಿಯಲ್ಲಿ ಬೇಂದ್ರೆಯವರು ಬರೆದು ಮುಗಿಸಲಿಲ್ಲ.

ಅವರ ಸ್ಫೂರ್ತಿ ಕರೆದಾಗ ಬರುವಾಕೆಯಲ್ಲ. ಎಂತಲೇ ಅವರಿಂದ ಏನಾದರೂ ಲೇಖನಕಾರ್ಯ ಮಾಡಿಸುವುದು ಅಷ್ಟು ಸುಲಭವಲ್ಲ. ಅವರಿಂದ ಲೇಖನ ಅಪೇಕ್ಷಿಸಿದವರು ಅವರನ್ನು ಕಂಡು ಮಾತನಾಡುವಾಗ ತಾವು ಹೋದ ಕಾರಣ ಮರೆತು ಸುಮ್ಮನೆ ಅವರ ಮಾತು ಕೇಳಿ ಬಂದುದುಂಟು. ಅವರು ಲೇಖನ ಬರೆಯಲು ಒಪ್ಪುವುದು ಸುಲಭ; ಕೆಲಸವಾಗುವುದು ಅಪೇ ಕ್ಷಿಸಿದವರ ಗ್ರಹಬಲದ ಮೇಲೆ. ಅವರೆಂದೂ ಗಡಿಯಾರದ ದಾಸರಲ್ಲ. ಸಮ ಯಕ್ಕೆ ಹೊರಡುವ ರೈಲು ಅವರಿಗೆ ಎಂದೂ ಸಿಕ್ಕುವದಿಲ್ಲ. ಈಗೀಗ ರೈಲಿನ ಸಮಯ ಬೇಂದ್ರೆಯವರ ಕಾವ್ಯಪ್ರೇರಣೆಯ ಸಮಯಕ್ಕೆ ಬಂದು ಸ್ಫೂರ್ತಿ ಬಂದಾಗ ಚಲಿಸುತ್ತವೆಯೆನ್ನಬಹುದು. ರೈಲಿನ ಸಮಯವನ್ನು ಕುರಿತು ಬೇಂದ್ರೆಯವರು ಒಂದು ಕತೆ ಹೇಳುತ್ತಾರೆ: ಒಂದು ರೇಲ್ವೆ ನಿಲ್ದಾಣ. ಅಂದಿನ ಮೇಲ್‌ಗಾಡಿಯಿಂದ ಮುಂಬೈಗೆ ಹೋಗುವ ಪ್ರವಾಸಿಗಳು ರೈಲಿಗಾಗಿ ಕಾಯುತ್ತಿದ್ದಾರೆ. ಮೇಲ್ ಎರಡು ಗಂಟೆಗೇ ಬರಬೇಕು. ಮೂರು ಗಂಟೆ ಯಾದರೂ ಬರಲಿಲ್ಲ. ಆಗ ಒಬ್ಬ ಪ್ರವಾಸಿ ಸ್ಟೇಶನ್ ಮಾಸ್ತರರನ್ನು ಕೇಳಿದ: ಒಂದು ಗಂಟೆ ಊರಲ್ಲಿ ಸುತ್ತಾಡಿಕೊಂಡು ಬರಲು ಅವಕಾಶವಿದೆಯೋ ಮೇಲ್ ಬರಲು—ಎಂದು. 'ಓ–ಧಾರಾಳವಾಗಿ' ಎಂದರು ಸ್ಟೇ. ಮಾಸ್ತ ರರು. ಪ್ರವಾಸಿ ಹತ್ತು ಹೆಜ್ಜೆ ಹೋಗಿದ್ದ—ಅಷ್ಟರಲ್ಲಿ ಒಂದುಗಾಡಿ ಮುಂಬೈ ಅಭಿಮುಖವಾಗಿ ಕೂಗುತ್ತ ಬಂತು. ಪ್ರವಾಸಿ ತಿರುಗಿ ಓಡಿಬಂದು ಗಾಡಿ ಹತ್ತಹೋದ. ಸ್ಟೇಶನ್ ಮಾಸ್ತರರು ಕೇಳಿದರು: 'ನೀವು ಇಂದಿನ ಮೇಲ್

ಗಾಡಿಯಿಂದ ಹೋಗಬೇಕಷ್ಟೆ '—ಎಂದು. 'ಹೌದು' ಎಂದ ಪ್ರವಾಸಿ. 'ಹಾಗಾದರೆ ಈ ಗಾಡಿಯೇಕೆ ಹತ್ತಿದಿರಿ ? ಇದು ನಿನ್ನೆಯ ಪ್ಯಾಸೆಂಜರ್'— ಎಂದರು– ಸ್ಟೇಶನ್ ಮಾಸ್ತರರು.

ಹೀಗೆ ಒಂದೊಂದುದಿನ ತಡವಿರುವ ಗಾಡಿಯಿಂದ ಬೇಂದ್ರೆಯವರನ್ನು ಕಳಿಸಬಹುದು. ಆದರೆ ನಿರ್ದಿಷ್ಟ ಸ್ಥಳದಲ್ಲಿ ಇವರನ್ನೊಬ್ಬರು ಇಳಿಸಿಕೊಳ್ಳ ಬೇಕು. ಮಧ್ಯ ಎಲ್ಲಿಯಾದರೂ ಗಾಡಿ ಬದಲಿಸುವುದಿದ್ದರೆ ಇವರು 'ಭೂಮಿ ದುಂಡಗಿದೆ' ಎಂಬುದಕ್ಕೆ ಸಾಕ್ಷಿಯಾಗಿ ಹೊರಟ ಸ್ಥಳಕ್ಕೇ ತಿರುಗಿಬಂದಾರು ಒಂದು ವೇಳೆ ಬದಲಿಸಿದರೆ ಇಳಿಯುವಾಗ ಇವರ ಸಾಮಾನು ಇವರ ಬಳಿ ಇರುವುದಿಲ್ಲ.

ಇವರು ಸದಾ ಕಾವ್ಯಚಿಂತನೆಯಲ್ಲಿರುತ್ತಾರೆಂದು ಭಾವಿಸಲಾಗದು. ಇವರಿಗೆ ಮಾತು ಸಿಕ್ಕರೆ ಮಾರು ಹೊಲ ಸಿಕ್ಕಂತೆ. ಇವರು ನೋಡುವ ದೃಷ್ಟಿ ದುರ್ಬೀನುದೃಷ್ಟಿ. ಇವರಿಗಿರುವ ಜಿಜ್ಞಾಸೆ–ಸರ್ವಜ್ಞನ ಜಿಜ್ಞಾಸೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯುವರು ಶ್ರೀ. ಬೇಂದ್ರೆಯವ ರಿಗೆ 'ಜೈಮಿನಿಭಾರತ ಸಂಗ್ರಹ' ಸಂಪಾದಿಸಿಕೊಡಲು ಕೇಳಿಕೊಂಡರು. ನಾಡಿನ ಮೂಲೆ ಮೂಲೆಯಲ್ಲಿರುವ ಕೈಬರಹದ—ಓಲೆಗರಿಯ ಪ್ರತಿಗಳನ್ನು ಹುಡುಕಿ ತಂದರು ಬೇಂದ್ರೆಯವರು. ಎಲ್ಲಾ ದುರ್ಬೀನು ಹಾಕಿ ನೋಡಿದರು. ಸಂಗ್ರಹದ ಕೆಲಸ ಬೆಳೆದು ಬೆಟ್ಟವಾಗಿ ಆರೆಂಟು ವರುಷ ತಿಂದಿತು. ವಿಶ್ವ ವಿದ್ಯಾನಿಲಯದವರು ಆತುರದ ಪತ್ರ ಬರೆಯುತ್ತಲೇ ಇದ್ದರು. ಬೇಂದ್ರೆ ಯವರು ವಿಷಯ ತೋಡುತ್ತಲೇ ಇದ್ದರು. ಸ್ನೇಹಿತರು ನೆರವಿಗೆ ನಿಂತರು. ಬೇಂದ್ರೆಯವರಿಗೆ ತೃಪ್ತಿಯಾಗುವಂತೆ ಕೆಲಸ ನಡೆಯಲು ಸಮಯವೇ ಸಾಲ ದಾಯಿತು. ಒಮ್ಮೆ ಒತ್ತಾಯದ ಅವಸರ ನಡೆದು ಕೆಲಸ ಮುಗಿಯಿತು. ಮಾನ್ಯರೊಬ್ಬರು ಏನೋ ಸುಧಾರಣೆಯನ್ನೋ— ಬದಲಾವಣೆಯನ್ನೋ ಸೂಚಿಸಿದರಂತೆ! ಕೆಲಸ ಅಲ್ಲಿಗೇ ನಿಂತಿತು ಬೇಂದ್ರೆಯವರ ಜೈಮಿನಿಭಾರತದ ಅಭ್ಯಾಸದ ಫಲ ಕನ್ನಡಿಗರಿಗೆ ಇನ್ನೂ ದೊರೆಯಲೇ ಇಲ್ಲ.

ಬೇಂದ್ರೆಯವರು ಮೂಕರನ್ನೂ ಮಾತಾಡಿಸಬಲ್ಲರು–ಎಂದರೆ ಉತ್ಪ್ರೇಕ್ಷೆ ಆದೀತು. ಒಮ್ಮೆ ಬೇಂದ್ರೆಯವರೇ ಮೂಕರಾಗಬೇಕಾದ ಸಂದರ್ಭ ಬಂತು. ಮುಂಬೈ ಸಾಹಿತ್ಯಸಮ್ಮೇಳನದ (೧೯೩೫) ಕವಿಗೋಷ್ಠಿಗೆ ಬೇಂದ್ರೆ

ಯುವರು ಅಧ್ಯಕ್ಷರಾಗಿದ್ದರು. ಆಗ ಪುಣೆಯಲ್ಲಿ ಪ್ರೊ. ಗೋಕಾಕರಿದ್ದರು. ಗುಂಪಿನ ಗೆಳೆಯರೆಲ್ಲ ಎರಡುದಿನ ಮುಂಚಿತವಾಗಿ ಪುಣೆಯಲ್ಲಿ ಕೂಡಿದರು. ಹಗಲಿರುಳೆನ್ನದೆ ದೂರದಿಂದ ಬಂದ ಗೆಳೆಯರೊಡನೆ ಬೇಂದ್ರೆಯವರು ಮಾತ ನಾಡಿದರು. ಬೇಂದ್ರೆಯವರ ದನಿ ಒಡೆಯಿತು. ಮುಂದೆ ಮೂರುದಿನಕ್ಕೆ ಇವರ ಅಧ್ಯಕ್ಷ ಭಾಷಣವಾಗಬೇಕು. ಒಬ್ಬರು ಇವರು ಮೂರುದಿನ ಮಾತನ್ನೇ ನಿಲ್ಲಿಸಬೇಕು ಎಂದು ಸೂಚಿಸಿದರು. ಅದು ಎಲ್ಲರಿಗೂ ಸರಿ ಕಂಡಿತು. ಬೇಂದ್ರೆಯವರಿಗೆ ಈ ಮಾತಿನ ಉಪವಾಸದಿಂದ ಬಹಳ ತೊಳ ಲಾಟವಾಯಿತು. ಇವರನ್ನು ಮಾತಾಡಗೊಡದ ಹಾಗೆ ಒಬ್ಬ ಗಟ್ಟಿಗನಾದ ಗೆಳೆಯನ ಕಾವಲಿರಿಸಿತು. ಬೇಂದ್ರೆಯವರು ಮೂಕ–ಸನ್ನೆ ಸುರು ಮಾಡಿ ದರು. ಮುಂಬೈ ಗಾಡಿಯಲ್ಲಿ ಈ ಮೂಕ ಪ್ರದರ್ಶನ ನಡೆಯಿತು. ದಾರಿಯ ನೋಟದ ಬಗ್ಗೆ, ಗಾಡಿಯು ಜನರ ಬಗ್ಗೆ ಇವರ ಸನ್ನೆ ಸುರುವಾಯಿತು. ಕೈಯಲ್ಲಿ ಬೆರಳಿನಿಂದ ಬರೆದು ಕೇಳಿದರು—ಕಾವಲುಗೆಳೆಯ ಇವರ ಈ ಕಾಟ ತಡೆಯಲಾರದೆ ಬೇಸತ್ತ. ಇವರ ಮೂಕ ಪ್ರಶ್ನೆಗಳಿಗೆ ಉತ್ತರ ಕೊಡಲಾರದೆ ಸೋತುಹೋದ. ಆಗ ಬೇಂದ್ರೆಯವರು ಮಾತಿನ ಉಪೋಷಣ ಮುರಿದರು. ಮೊಗದಲ್ಲಿ ಗೆದ್ದ ಗಾಂಭೀರ್ಯವಿತ್ತು.

ಸಾಹಿತ್ಯವೊಂದೇ ಇವರ ಮಾತಿನ ವಿಷಯವಲ್ಲ. ಇವರಾಡುವ ಮಾತೇ ಸಾಹಿತ್ಯವಾಗುತ್ತದೆ. ಹಳ್ಳಿಯ ಹಾಲು ಮಾರುವಾಕೆಯೊಡನೆ ಮಾತನಾಡು ತ್ತಾರೆ. ಪಟ್ಟಣದ ಶೆಟ್ಟಿಯೊಡನೆಯೂ ಮಾತನಾಡುತ್ತಾರೆ. ರಾಜಕಾರಣ ವಿರಲಿ, 'ಗೃಹ' ಖಾತೆಯ ಕಲಹವೇ ಇರಲಿ, ವೇದಾಂತವಿರಲಿ, ವಿಜ್ಞಾನ ವಿರಲಿ, ಯಂತ್ರ-ಮಂತ್ರ-ತಂತ್ರ ಏನೇ ಇರಲಿ ಎಲ್ಲಾ ವಿಷಯ ಇವರಿ ಕುತೂಹಲಕಾರಿ. ವಾರಪತ್ರಿಕೆ ತೆರೆದರೆ ಮೊದಲು ವಾರದ ಭವಿಷ್ಯ ನೋಡು ತ್ತಾರೆ. ಇವರಿಗೆ ತಮ್ಮ ಸ್ನೇಹಿತರ ರಾಶಿ ಯಾವುದೆಂದು ಗೊತ್ತು. ಅವರೆಲ್ಲ ಭವಿಷ್ಯ ತಿಳಿಯದೆ ಪುಟ ತಿರುವುವದಿಲ್ಲ. ಇಂಗ್ಲಿಷಪತ್ರಿಕೆ ಸಿಕ್ಕರೆ ಮೊದ Tit-bits ನೋಡುತ್ತಾರೆ. ನಗೆ ಬರೆಹಗಳಿದ್ದರೆ ಹುಡುಕುತ್ತಾರೆ. ಮಾತಿನ ವಿನೋದ-ಆತ್ಮೀಯತೆಯಿರುವುದರಿಂದ ಇವರಿಗೆ ಎಲ್ಲ ಬಗೆಯವರಲ್ಲಿ—ಯಾ ವಿಷಯದ ಬಗೆಗಾದರೂ ಮಾತಿಗೆ ಎಡೆಯಿದೆ. ನಮಗೆ ಸಾಹಿತ್ಯ ಯಾ ಎನ್ನುವವರು ಇವರ ಮಾತನ್ನು ತಾಸುಗಟ್ಟಲೆ ಕೇಳುತ್ತಾರೆ. ಇದೇ ಸಾಹಿತ್ಯ

ಎಂದರೆ ನಮಗದು ಬೇಕು ಎನ್ನುತ್ತಾರೆ. ಬೇಂದ್ರೆಯವರಿಗೆ ರತ್ನನ ಬೇಸ್ವಾರ್ಸಿಯಂಥವನು ಬರೆದುಕೊಳ್ಳುವುದಕ್ಕೆ ಒಬ್ಬ ಇದ್ದಿದ್ದರೆ **'ಬೇಂದ್ರೆ ಸಾಹಿತ್ಯ'** ಇನ್ನೂ ಬಹಳ ದೊಡ್ಡ ಪ್ರಮಾಣದಲ್ಲಿ ಬಯಲಿಗೆ ಬರು- ತ್ತಿತ್ತೇನೋ.

ನಗೆ ಬೇಂದ್ರೆಯವರ ಬಾಳಬೆಳಕು. ಇವರದು ಯಾವಾಗಲೂ ನಕ್ಕು ನಗಿಸುವ ನಗೆ. ಅದರಿಂದಲೇ ಅವರು ಬಾಳಗೋಳನ್ನು ಸಹಿಸಬಲ್ಲರು. ಇನ್ನೊಬ್ಬರನ್ನೂ ಸಾಂತ್ವನಗೊಳಿಸಬಲ್ಲರು. ಮೊನ್ನೆಮೊನ್ನೆ ಕೈಗೆಬಂದ ಅವರ ಹಿರಿಯಮಗ ತೀರಿಕೊಂಡ. ಆ ದುಃಖ ತಡೆದುಕೊಳ್ಳಲು ಅವರ ಆತ್ಮಕ್ಕೆ ಇರುವ ಯಾವ ಸಂಸ್ಕಾರಬಲ ಸಹಾಯವಾಯಿತೋ! ವಿಶಾಲಜಗತ್ತಿನ ದುಃಖ ತನ್ನದಾಗಿ ಮಾಡಿಕೊಂಡವನ ದುಃಖ ವಿಶಾಲಜಗತ್ತಿನಲ್ಲಿ ಹಂಚಿ ಹೋಗುತ್ತದೆ. ಬೇಂದ್ರೆಯವರೇ ಹೇಳಿದ್ದಾರೆ:

> ತನ್ನವರ ಸುಖ-ದುಃಖ
> ತನ್ನದೆನ್ನುವ ಲೆಕ್ಕ
> ತನ್ನ ಸುಖ-ದುಃಖ ತನ್ನವರದೆಂಬ
> ಸಾನುಭೂತಿಯ ಜಗವು
> ಸ್ವಾನುಭೂತಿಯ ಸೊಗವು
> ಇದುವೆ ಜೀವನವು; ಉಳಿದದ್ದು ಜಂಬ

ಈ ಆಳವಾದ ಅನುಭವವನ್ನು ತಮ್ಮ ಜೀವನದಲ್ಲಿಯೇ ಕಂಡುಂಡು ಜೀವನವನ್ನು ಕಟುವಾದರೂ ಮಧುರವಾಗಿ ಕಾಣುವ ಈ ಕವಿ ನಗೆಯಿಂದ ತಾ ಬೆಳಗಿ ಜಗ ಬೆಳಗುವ ಶಕ್ತಿಯನ್ನು ಪಡೆದಿದ್ದಾರೆ. ಉಣ್ಣುವ ಊಟ, ಕುಡಿಯುವ ನೀರು ಇವೆರಡರಿಂದಲೇ ಮಾನವ ಬದುಕಬಲ್ಲನೇ? ಮನೋ- ವಿಕಾಸಕ್ಕೆ, ಆತ್ಮದರ್ಶನಕ್ಕೆ ಇನ್ನೇನೆಲ್ಲಾ ಬೇಕಾಗಬಹುದು. ಆದರೆ ನಗೆ ಒಂದು ಅಗತ್ಯದ ಸಾಧನವೆಂದು ಬೇಂದ್ರೆಯವರನ್ನು ಕಂಡ ಎಲ್ಲರಿಗೂ ಅನಿಸದಿರುವುದಿಲ್ಲ. ಸಂವಾದದಲ್ಲಿ ಇವರು ನಗೆಯನ್ನು ಹೇಗೆ ತೇಲಿಸುತ್ತಾರೆ ಎನ್ನುವದಕ್ಕೆ ಕೆಳಗಿನ ಎರಡು ಮಾತು ನಿದರ್ಶನವಾಗಬಲ್ಲವು.

ಮೊನ್ನೆ ಒಬ್ಬರ ಕೂಡ ಸಂವಾದ ನಡೆದಿತ್ತು. ಒಂದು ವಿಷಯದ ನಿರೂಪಣೆ ಜತೆಯವರಿಗೆ ತಿಳಿಯಲಿಲ್ಲ. ಬೇಂದ್ರೆಯವರು ಒಂದು ಉದಾಹರಣೆ

ಕೊಟ್ಟರು: ರಾಮು, ಕೃಷ್ಣ ಯಾವುದೋ ಕಾರಣಕ್ಕಾಗಿ ೧೯೩೦ರಲ್ಲಿ ಜಗಳಾಡಿದರು; ಮಾತು ಬಿಟ್ಟರು. ಮುಂದೆ ೧೯೪೦ರಲ್ಲಿ ಎಲ್ಲಾ ಮರೆತು ಗೆಳೆಯರಾದರು. ಮುಂದೆ ಒಂದು ದಿನ ರಾಮು, ಕೃಷ್ಣನಿಗೆ ಕೇಳಿದ: "ನಾವೆಲ್ಲಾ ಗೆಳೆಯರಾದೆವು. ಆದರೆ ನಮ್ಮ ೧೯೩೦ರ ಜಗಳವೊಂದು ಹಾಗೇ ಉಳಿಯಿತಲ್ಲಾ!"

*   *   *   *   *

ಒಬ್ಬ ಔಷಧ ವ್ಯಾಪಾರಿ ಮಾರುವ ಎಲ್ಲ ಔಷಧಿಗಳನ್ನು ತಾನು ಉಪಯೋಗಿಸಿದ ಹಾಗೆ 'ಅನುಭವದಿಂದ ಹೇಳುತ್ತೇನೆ; ಇದು ಬಹಳ ಗುಣಕಾರಿಯಾಗಿದೆ, ಹಾಗೆ-ಹೀಗೆ' ಎಂದು ಹೇಳುತ್ತಿದ್ದ. ಒಂದು ಔಷಧ ಹತ್ತು ರೋಗಗಳಿಗೆ ಬರುವುದೆಂದೂ ಹೇಳುತ್ತಿದ್ದ. ಬೇಂದ್ರೆಯವರಿಗೆ ಒಂದು ಶಕ್ತಿವರ್ಧಕ ತ್ರಾಣಿಕ (ಟಾನಿಕ್) ಬೇಕಾಗಿತ್ತು. ಅವನು ಒಂದನ್ನು ತೆಗೆದು ಕೊಡುತ್ತ ಅದರ ಗುಣ ವರ್ಣನೆ ಮಾಡುತ್ತಾ ಅದು ಶಕ್ತಿಯನ್ನು ಕೊಡುವುದಲ್ಲದೆ ನಪುಂಸಕತೆಯನ್ನೂ ಕಳೆಯುತ್ತದೆ—ಎಂದು ಹೇಳಿದ. "ಇದನ್ನೂ ಅನುಭವದಿಂದ ಹೇಳುತ್ತೀರಾ?" ಎಂದರು ಬೇಂದ್ರೆಯವರು.

*   *   *   *   *

ಒಮ್ಮೆ ಒಬ್ಬ ಕವಿಮಿತ್ರರು ಬೇಂದ್ರೆಯವರ ಮುಂದೆ ತಾವು ಹೊಸದಾಗಿ ಬರೆದ ಒಂದು ಸುದೀರ್ಘ ಕವನ ಓದುತ್ತಿದ್ದರು. ಬೇಂದ್ರೆಯವರ ಎಳೆಮಗು ಅವರ ಮಡಿಲಲ್ಲಿ ಆಟವಾಡುತ್ತಿತ್ತು. ಕವಿತೆಯ ಓದು ಸಾಗಿತ್ತು. ಸ್ವಲ್ಪ ಹೊತ್ತಿನಲ್ಲಿ ಮಗು ಅಲ್ಲೇ ನಿದ್ರೆ ಮಾಡಿತು. ಆಗ ಬೇಂದ್ರೆಯವರು ಆಕಳಿಸುತ್ತ ಮಿತ್ರರಿಗೆ ಹೇಳಿದರು: 'ಈ ಹುಡುಗನ ಮೇಲಂತೂ ನಿಮ್ಮ ಕವಿತೆ ಪ್ರಭಾವ ಬೀರಿತು.'

*   *   *   *   *

ಕವಿವರ ಬೇಂದ್ರೆಯವರು ಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ಈಗ ಕಾಲೇಜಿನಲ್ಲಿ ಕಲಿಸುತ್ತಾರೆ. ಈ ಶಾಲೆ-ಕಾಲೇಜಿನ ಶಿಷ್ಯ–ಪಡೆಗಿಂತ ಅವರ 'ಮಾನವ ಕಾವ್ಯ'ಕ್ಕೆ ಮನಸೋತು ನಾಡಿನಲ್ಲೆಲ್ಲ ಹಬ್ಬಿದ ಹಬ್ಬುತ್ತಿರುವ ಶಿಷ್ಯರ ಪಡೆಯೇ ದೊಡ್ಡದು. ಅವರು ತಮ್ಮ ಶಿಷ್ಯರಿಗೆಲ್ಲ ಗೆಳೆಯರೆಂದೇ ಹೇಳುತ್ತಾರೆ. ಅವರ ಬಾಳಿನುದ್ದಕ್ಕೂ ಈ ಶಿಷ್ಯಸ್ನೇಹ ಸಾಲುಮರದ ಹಾಗೆ

ಇವರು ನಡೆದ ದಾರಿಯ ನೆಳಲಾಗಿ, ಸಂಗಾತಿಯಾಗಿ, ಮೈಲುಕಲ್ಲುಗಳಾಗಿ ಬೆಂಬಿಡದೆ ಸಾಗುವಂಥದೇ. ಅವರು ತಮ್ಮ ಬಾಳಪಯಣದಲ್ಲಿ ಈ ಸಂಗಾತಿಗಳ ಜೀವನವೃಕ್ಷಗಳನ್ನು ವಸಂತನಾಗಿ ಚಿಗುರಿಸಿದ್ದಾರೆ; ಅರಳಿಸಿದ್ದಾರೆ. ಹೂ ಬಿಟ್ಟ ಮರ ಪ್ರಕೃತಿನಿಯಮದಂತೆ ಫಲಬಿಡುತ್ತಲಿರುವುದನ್ನು ತಾವೂ ಕಂಡು ಸಂತಸಗೊಂಡಿದ್ದಾರೆ. ಇವರು ಚೆಲ್ಲಿದ ಬೆಳಕಿನಲ್ಲಿ ದಾರಿಗಂಡವರು, ಕೊಟ್ಟ ದೃಷ್ಟಿಯಲ್ಲಿ ಬಾಳನರಿತವರು ಅತೃಪ್ತಿಯಿಂದ ತೃಪ್ತಿಯೆಡೆಗೆ, ಅಸಹನೆಯಿಂದ ತಾಳ್ಮೆಯ ಕಡೆಗೆ, ನಿರಿಚ್ಛೆಯಿಂದ ಸದಾಶಯದ ಕಡೆಗೆ—ತನ್ಮೂಲಕ ವಿರಸದಿಂದ ಸಮರಸದ ಕಡೆಗೆ ಸಾಗಿರುವರಲ್ಲದೆ ಕಲ್ಲೆದೆಯವರು ಕರಗಿದ ಎದೆಯವರಾಗಿ ಕತ್ತಲೆಯಿಂದ ಉಷೆಯ ಚುಮುಚುಮು ನಸುಕಿನಲ್ಲಿ ಬಂದು ನಿಂತಿದ್ದಾರೆ.

ಅಂದು ಒಂದು ಸುನೀತದಿಂದ ಮೊದಲುಗೊಂಡು ಇಂದಿನ ವರೆಗೆ ನನ್ನ ಸಾಹಿತ್ಯ ಪ್ರೇರಣೆಗೆ, ಕ್ಷೇಮಕ್ಕೆ ಕಾರಣರಾದ ಗುರುವನ್ನು ಒಂದು ಸುನೀತದಿಂದಲೇ ಪೂಜಿಸುತ್ತೇನೆ.

‘ ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ ’
ಎಂದು ನುಡಿದನು ಅಂದು ಸಿಡಿಲನುಡಿ ಸರ್ವಜ್ಞ
ಓ ಎನ್ನ ಗುರುದೇವ! ಈ ಮಾತ ನೆನೆಯುವರೆ
ಸಾಳೆಯನು ಕಂಡ ಕವಿ ಸನ್ನ ಕುರಿತಾಡಿದನೆ!

ಭಾವದಂತರ್ಮುಖತೆ ಹೂವಿನೊಲು ತಲೆಯೆತ್ತಿ
ನಗೆ ಬೀರಿ, ಸಂತಸವ ಸಲೆ ಬೀರಿ ಜಗದುಸಿರಿ-
ನೊಳು ಬೆರೆತು ಒಂದಾಗಿ, ಮುಂದಾಗಿ ನಾಳಿನೂ-
ಹೆಯ ಸಾರಿ ರವಿ ತೋರದಿಹ ನೋಟ ಬೀರುತಿಹೆ!

ರಸಿಕ ಲೋಕವನೆಲ್ಲ ಒಂದೆಡೆಗೆ ಸೆಳೆತಂದು
ಭಾವಲೋಕದಿ ಅವರ ಕರೆದು ಓಲಾಡಿಸುವೆ
ಬಾಳ ಕಹಿ-ಸಿಹಿಯಲ್ಲಿ ಸಹನೆ-ಸಂತಸವುಂಡು
ಕವನಿಸುವೆ ಕಲೆಯ ಕುಂಚದಿ ಬರೆದು ಜೀವಕಳೆ

ಕಲ್ಲನರಳಿಸಿ ಹುವ್ವ ಮಾಡಿ ತೋರುವರುಂಟೆ!
ಸಿರಿ ನುಡಿಗೆ ಸೋಲದಿಹ ಕಲ್ಲಿನೆದೆಯವರುಂಟೆ!

ದಿವಂಗತ

# ಪೋತದಾರ ಶ್ರೀನಿವಾಸರಾಯರು

ಧಾರವಾಡ ನಿಲ್ದಾಣದಿಂದ ಪಟ್ಟಣದ ಕಡೆಗೆ ಬರುವಾಗ ಒಂದು ಕೂಗಳತೆಯಲ್ಲೇ ಬಲಬದಿಗೆ ಒಂದು ಕನ್ನಡ ಹಲಗೆ ಕಾಣುತ್ತದೆ; 'ಶ್ರೀನಿವಾಸ ಕಂಪನಿ; ಚಿತ್ರಕಲಾಮಂದಿರ' ಎಂದು. ಅದರ ಒಡೆಯರು ಶ್ರೀ ಪೋತದಾರ ಶ್ರೀನಿವಾಸರಾಯರು. ಅವರು ಧಾರವಾಡದ ಬಲ ಇದ್ದ ಹಾಗೆ. ಯಾವ ಸ್ಟೇಶನ್‌ದಲ್ಲೇ ಇಳಿಯಿರಿ; ಮೊದಲು ಕಾಣುವದು ಒಂದು ರೆಸ್ಟೋರಂಟ್, ಒಂದು ಹೋಟೆಲ್, ಇನ್ನು ಯಾವದೋ ಕಂಪನಿ. ಯಾವ ಬೋರ್ಡೂ ಕನ್ನಡವಲ್ಲಿ ಇರುವದಿಲ್ಲ. ಯಾಕಂದರೆ ಬರುವ ಗಾಡಿ ಕನ್ನಡ ಬಲ್ಲವರನ್ನು ತರುವದೇ ಇಲ್ಲ ಎಂಬ ಸಿದ್ಧಾಂತ ನಮ್ಮದು. ಕನ್ನಡಿಗರಾದರೆ ಯಾವುದೆ ಅಕ್ಷರ ಸಹನೆಯಿಂದ ಓದುತ್ತಾರೆ---ಎಂಬ ಭರವಸೆ ನಮ್ಮದು. ಇದು ಒಂದು ಔದಾರ್ಯ! ಈ ಔದಾರ್ಯ ನಮ್ಮ ಅವಲಕ್ಷಣದ ತೋರಣ ಎಂದು ಸಾರಿದರು ಶ್ರೀನಿವಾಸರಾಯರು. ಇದು ಅಸಹನೆ ಎನಿಸಿದರೂ ಅದೇ ನಮ್ಮ ಗೌರವ ಎಂದರು. ಧಾರವಾಡದಲ್ಲಿ ಈ ಅವಲಕ್ಷಣಕ್ಕೆ ಎಡೆಗೊಡದೆ ಧಾರವಾಡದ ದ್ವಾರಕ್ಕೇ ನೆಟ್ಟರು ಕನ್ನಡ ಬಾವುಟವನ್ನು. ಎಂತಲೇ ಅವರು ಧಾರವಾಡದ ಬಲ— ಎಂದದ್ದು.

ಬರೀ ಬೋರ್ಡಿನಲ್ಲೇನಿದೆ ಎನ್ನುತ್ತೀರಾ? ಅದು ಹಲಗೆಗೆ, ತಗಡಿಗೆ ಬರೆದ ಅಕ್ಷರಗಳಲ್ಲ— ಶ್ರೀನಿವಾಸರಾಯುರು ತಮ್ಮ ಎದೆಯಲ್ಲಿ ಕೊರೆದು ಕೊಂಡ, ಬರೆ ಎಳೆದುಕೊಂಡ ಕನ್ನಡ ಅಕ್ಷರಗಳವು. ಅವರ ವೃತ್ತಿ, ಚಿತ್ರ-ಬರೆಯುವುದು, ಪಡಿಯಚ್ಚು ಮಾಡುವದು. ಅವರು ಈ ಕಲೆ ಅಭ್ಯಾಸ ಮಾಡಿದ್ದು ಮುಂಬಯಿಯಲ್ಲಿ. ಮೊದಲು ಕಲಕತ್ತೆಗೂ ಹೋಗಿದ್ದರಂತೆ. ಅವರು ಮುಂಬಯಿಯಲ್ಲಿ ಪಟ್ಟ ಕಷ್ಟ ಹಿರಿಯರು ಹೇಳುತ್ತಾರೆ—ಅದು ಮುಂಬಯಿ ಸಮಾಚಾರ. ದಿನಾ ನಮ್ಮ ಎದುರಿಗೇ ನಡೆಯುವ ಕಷ್ಟಜೀವನ ನಾವೆಷ್ಟು ನೋಡುವದಿಲ್ಲ! ಜನ ಕಷ್ಟಬಡುವುದೇ ನಮ್ಮ ಅವಮಾನ—ಎಂಬ ತಿಳಿವು ಎಂದಿನವರೆಗೆ ನಮಗೆ ಬರುವುದಿಲ್ಲವೋ ಅಂದಿನವರೆಗೆ ನಾವು ಇದ್ದೂ ಸತ್ತ ಹಾಗೆ. ಶ್ರೀನಿವಾಸರಾಯರು ತಮ್ಮ ಜನರು 'ಸತ್ತವರು'

ಎಂದರೆ 'ಅಶುಭ' ಎಂದು ತಿಳಿಯುತಿದ್ದರು. ಎಂತಲೇ ತಮ್ಮ ಕಷ್ಟದ ದಿನ ಹೊರನಾಡಿನಲ್ಲಿ ಕಳೆದರು. ಇಲ್ಲಿ ಇರುವಷ್ಟು ದಿನ ಕನ್ನಡಿಗರ ಮರ್ಯಾದೆಗಾಗಿ ಸತ್ತು ಬದುಕಿದರು.

ಮರ್ಯಾದೆಯೆಂದರೇನು? ಗೌರವವೆಂದರೇನು? ದಾಸ್ಯಕ್ಕೆ ಬಲಿಯಾದ ಹೃದಯಕ್ಕೆ ಮರ್ಯಾದೆಯೆಲ್ಲಿ? ಅದರ ಆವರಣವಾದ ದೇಹಕ್ಕೆ, ಹೆಸರಿಗೆ ಗೌರವ ಎಂಥದು? ನಾವು ದಾಸರಾಗಿದ್ದೇವೆ;–ಇದು ದೇಶವಾಚಕವಾದುದು. ಪರಿಶುದ್ಧವಾದ ಆತ್ಮ ಎಂದೂ ದಾಸ್ಯದಲ್ಲಿ ಕೊಳೆಯುವದಿಲ್ಲ. ಆತ್ಮಕ್ಕೆ ದಾಸ್ಯವೇ ಕಲಂಕ; ಸ್ವಾರ್ಥ ಅದಕ್ಕೆ ಅಂಟಿಕೊಂಡ ರೋಗ. ಆತ್ಮಶಕ್ತಿಯಿದ್ದವರು ಸ್ವೈರವಲ್ಲದ ಸ್ವಾತಂತ್ರ್ಯದ ದಾರಿಯಲ್ಲಿ ನಡೆದರೆ ಭವಿಷ್ಯ ಖಂಡಿತ ಉಜ್ವಲವಾಗುತ್ತದೆ. ಸ್ವಾರ್ಥ ವ್ಯಕ್ತಿಗೆ ಹತ್ತಿಕೊಂಡರೆ ವ್ಯಕ್ತಿಯ ಗೌರವಕ್ಕೆ ಕುಂದು. ನಾಡಿಗಾಗಿ ಹಬ್ಬಿದರೆ ನಾಡಿಗೆ ಹಿತ; ವ್ಯಕ್ತಿಗೆ ಗೌರವ. ಶ್ರೀನಿವಾಸ ರಾಯರು ಇಂಥ 'ಸ್ವಾರ್ಥಿ'ಗಳಾಗಿದ್ದರು. ಎಂತಲೇ ನಾಡಿನ ಹಿತ ಸಾಧಿಸಿ ತಮ್ಮ ಗೌರವ ಕಾಪಾಡಿಕೊಂಡರು.

ಧಾರವಾಡದ ಜನ ಶ್ರೀನಿವಾಸರಾಯರಿಗೆ ಅಚ್ಚುಮೆಚ್ಚಿನಿಂದ 'ಶೀನಪ್ಪ' ಎಂದು ಕರೆಯುತ್ತಿದ್ದರು. 'ಶೀನಪ್ಪ ಹುಚ್ಚ–ತಲೆ ತಿರುಕ' ಎಂದು ಅನ್ನುವ ಜನಕ್ಕೆ ಕಡಮೆಯಿಲ್ಲ. ನಮ್ಮ ದುರ್ದೈವ, ಶೀನಪ್ಪನವರಿಗೆ ಹಿಡಿದ 'ಕನ್ನಡ ಹುಚ್ಚು' ಇನ್ನೂ ಹತ್ತು ಜನಕ್ಕೆ ಹಿಡಿದಿದ್ದರೆ, ಅವರ ತಲೆ ತಿರುಗಿದ ಹಾಗೆ ಇನ್ನೂ ಹತ್ತು ಜನರ ತಲೆ ತಿರುಗುತ್ತಿದ್ದರೆ ಅಂದಿನ ಏಕೀಕರಣದ ಕನಸು ಇಂದು ನನಸಾಗುತ್ತಿತ್ತು. ಶೀನಪ್ಪನವರ ಹುಚ್ಚು ಅರಿವುಗೇಡಿತನದ್ದಲ್ಲ. ಮೈತುಂಬ ಕಣ್ಣಿದ್ದ ಸ್ವಾಭಿಮಾನಿಯ ಹುಚ್ಚು ಅದು. ಭಗ್ನಮನೋರಥನ ಹುಚ್ಚಲ್ಲ—ಆಶಾವಾದಿಯಾದ ಯೋಧನ ಹುಚ್ಚು ಶೀನಪ್ಪನವರದು. ಅವರ ಹುಚ್ಚಿಗೆ ಕುತೂಹಲಗೊಂಡವರೆಷ್ಟು—ಹೆದರಿಕೊಂಡವರೆಷ್ಟು? ನಾಚಿಕೆ ಪಟ್ಟವರೆಷ್ಟು? ಈ ಹುಚ್ಚು ಹಾಗೆ ಕರೆಯುವವರ ಸಂಕುಚಿತ ಮನೋವೃತ್ತಿಯದಲ್ಲ; ವಿವೇಕಪೂರ್ಣವಾದ ಹೃದಯವೈಶಾಲ್ಯದಿಂದ ಬಂದದ್ದು. ಇದರ ಫಲ ಹತ್ತು ಜನರ ಕಣ್ಣು ತೆರೆಸಿದ ಜಾಣ್ಮೆ. ಶೀನಪ್ಪ ಈ ಫಲ ಕಂಡಿರ-ಬೇಕು. ಎಂತಲೇ 'ಹುಚ್ಚ' ಎಂದರೆ ಅವರು ಸಿಟ್ಟಿಗೇಳುತ್ತಿದ್ದಿಲ್ಲ; ಹೆಮ್ಮೆ-ಯಿಂದ ನಕ್ಕುಬಿಡುತ್ತಿದ್ದರು.

ಶ್ರೀನಿವಾಸರಾಯರು ಮುಂಬಯಿಯಲ್ಲೇ ವ್ಯವಸಾಯ ಮಾಡುತ್ತ ಐಶ್ವರ್ಯವಂತರಾಗಬಹುದಿತ್ತು. ಇಂದಿನ ಧನಿಕರ ಹಾಗೆ ಕಾಸು ಎಸೆದು ಪರಾಕು ಹೇಳಿಸಿಕೊಳ್ಳಬಹುದಿತ್ತು. ಆದರೆ ಧಾರವಾಡಕ್ಕೆ ಬಂದು ನಾಡಿಗೆ ಇರುವ ಪಡಿಯಚ್ಚುಕೂಟದ ಒಂದು ಕೊರತೆ ಕಡಿಮೆಮಾಡಿದರು. ಅವರದು ಯಾವಾಗಲೂ ನಾಡಿನ ದೃಷ್ಟಿ. ಮನುಷ್ಯ ಹುಟ್ಟಿನ ಒಡನೇ ತನ್ನ ಕ್ಷೇಮ-ಚಿಂತನೆ ಹೊತ್ತು ತರುತ್ತಾನೆ. ಅದು ಅನಿವಾರ್ಯವಾದ ಅಗತ್ಯವಾದ ಕರ್ತವ್ಯ-ಕರ್ಮ. 'ತಾ ಬಲ–ಜಗ ಬಲ' ಎನ್ನುತ್ತಾರೆ. ಹೇಡಿ ತಾನೇ ಬದುಕಲಾರ. 'ಹುಟ್ಟಿಸಲು ಅಸಮರ್ಥವಾದ ಸಂತಸ ವ್ಯರ್ಥ.' ಬದುಕಬಲ್ಲ ಮನುಷ್ಯ ಬದುಕಿಸಬಲ್ಲ. ಅದು 'ಸಂತಸದ ಸಂತಾನ'. ಶ್ರೀನಿವಾಸರಾಯರು ತಮ್ಮ ವೃತ್ತಿಯಲ್ಲಿ ಗೌರವದಿಂದ ಬದುಕಿದರು. ದುಡಿಮೆಗೆ ತಕ್ಕ ಬದುಕು. ತಾನು ದುಡಿದ ಫಲ ತಾನು ಉಂಡ. ಇದು ಪ್ರಾಣಿಮಾತ್ರರಿಗೆ ಬಿಡದ ಕರ್ಮ. ತಾನು ಬದುಕುವದೊಂದೇ ಜೀವನ ಧರ್ಮವಲ್ಲ—ಎಂದರು ಶ್ರೀನಿವಾಸ ರಾಯರು. ತಮ್ಮನ್ನು ಗೌರವದಿಂದ ಕಾಪಾಡಿದ ಜನ ಯಾರು ? ಅವರಿಗೆ ತಾನು ಗೌರವ ತೋರಿಸಬೇಡವೇ ? ಇಲ್ಲಿಗೂ ಮುಗಿಯಲಿಲ್ಲ. ಒಂದು ವ್ಯಕ್ತಿಯ ಗೌರವ ನಾಡಿಗೆ ಗೌರವ ತರುವಂಥದಿರಬೇಕು. ಹೀಗೆ ದೃಷ್ಟಿ ವಿಶಾಲವಾದ ಹಾಗೆ ಕೆಲಸ ಬೆಳೆಯುತ್ತದೆ. ಈ ಕಾರ್ಯಬಾಹುಳ್ಯದಲ್ಲಿ ಕಾಣುವ ಫಲ ಅಲ್ಪ; ಕಾಣದ ಫಲ ದೊಡ್ಡದು. ಒಳ್ಳೆಯ ದೃಷ್ಟಿ ಯಾವಾಗಲೂ ಒಳ್ಳೆಯದನ್ನೇ ತಂದೀತು. ಶ್ರೀನಿವಾಸರಾಯರ ಬಹುಮುಖದ ಕಾರ್ಯ ವಿಸ್ತಾರ ನಾಡಿಗೆ ಒಳ್ಳೆಯದನ್ನೇ ಮಾಡಿದೆ. ಇಂದಿನ ಕಾರ್ಯಕರ್ತರ ಹೃದಯದಲ್ಲಿ ಅವರ ಚಿತ್ರ ಮಸಳಿಸದೆ ನಿಂತಿದೆ.

ಅಂಥ ಕೆಲಸ ಅವರು ಮಾಡಿದ್ದಾದರೂ ಏನು—ಎಂದರೆ ಅವರು ಮಾಡದೇ ಇದ್ದ ಕೆಲಸವಾವುದು ಎನ್ನಬೇಕಾಗುತ್ತದೆ. ಅವರದು 'ಕನ್ನಡದ ಕೆಲಸ'. ಕನ್ನಡನಾಡಿನ 'ಬೇಕು'ಗಳ ಪೂರೈಕೆಯ ಕಾರಖಾನೆ ಯಾಗಿತ್ತು ಅವರ ತಲೆ.

ಕರ್ನಾಟಕದಲ್ಲಿ ರಾಷ್ಟ್ರೀಯ ಮಹಾಸಭೆ ನೆರೆಯಿತು. ಮಾನವ-ಜನಾಂಗದ ಮಹಾಪುರುಷ ಮಹಾತ್ಮಾಜೀ ಅದಕ್ಕೆ ಅಧ್ಯಕ್ಷರಾಗಿ ದೊರೆತರು. ಕನ್ನಡಿಗರಿಗೆ ಇದಕ್ಕೂ ಹೆಚ್ಚಿನ ಮರ್ಯಾದೆ ಏನು ಬೇಕು ? ಆದರೆ ಬರುವ

ದೇಶವತ್ಸಲರಿಗೆ ಕರ್ನಾಟಕದ ಕಲ್ಪನೆ ಮಾಡಿ ಕೊಡಬೇಡವೆ? ಬೆಳಗಾವಿ ಯಾವ ನಾಡು? ಇಲ್ಲಿಯದು ಯಾವ ಸಂಸ್ಕೃತಿ? ಇಲ್ಲಿಯ ಇತಿಹಾಸ-ಏನು?—ಇದೆಲ್ಲಾ ಯಾರಿಗೆ ಬೇಕು—ಯಾಕೆ ಬೇಕು? ಇದು ಬೇಡವಾದರೆ ಸ್ವರಾಜ್ಯ ಯಾತಕ್ಕೆ? ಎಂದಿತು–ಶ್ರೀನಿವಾಸರಾಯರ ವ್ಯಕ್ತಿತ್ವ. ದೇಶವತ್ಸಲ-ರಿಗೆ ಕಿವಿ ಊದುವದು ಬೇಡ. ಕಣ್ಣು ಕಟ್ಟಿಸಬೇಕು, ತಲೆ ತಿರುಗಿಸಬೇಕು ಎನಿಸಿತು ಅವರಿಗೆ. "ವಿಜಯನಗರ", "ಪಂಪಾ ಸರೋವರ" ನಿರ್ಮಾಣ ವಾದವು. ಬೀದಿಗಳಿಗೆ ಕನ್ನಡ ಇತಿಹಾಸದ ಮುದ್ರೆ ಬಿತ್ತು. ಮಹಾದ್ವಾರ–ಹಂಪೆಯ ವಿರೂಪಾಕ್ಷ ದೇವಸ್ಥಾನದ ಗೋಪುರವಾಯಿತು. ಬಂದವರಿಗೆ ಇದನ್ನು ಅರಿಯದೆ ವಿಧಿಯಿಲ್ಲ. ಅರಿತವರಿಗೆ ಕನ್ನಡಿಗರಲ್ಲಿ ಆಸ್ಥೆ ತಾನಾ-ಗಿಯೇ ಹುಟ್ಟಿತು.

ಶ್ರೀನಿವಾಸರಾಯರು ಮಾಡಿದ ಅನೇಕ ಕಲಾಕೃತಿಗಳಲ್ಲಿ ಒಂದು ಕಡೆಗೆ ಸಂಗ್ರಹವಾಗಿ ಉಳಿದ ಕೃತಿಗಳು ಎರಡೆ. ಒಂದು "ಸಚಿತ್ರ ವಿಜಯನಗರ"—ಹಂಪೆಯ ಆರುನೂರು ವರ್ಷಗಳ ಮಹೋತ್ಸವದ ಕಾಲಕ್ಕೆ ವಿಜಯನಗರದ ಸಚಿತ್ರ ಕೈಪಿಡಿಯಾಗಿ ಈ ಪುಸ್ತಕವನ್ನು ಸುಂದರವಾಗಿ ಪ್ರಕಟಿಸಿದರು. ಎರಡನೆಯದು "ಕನ್ನಡದ ಮುನ್ನಡೆ" ಎಂಬ ಹೆಸರಿನಿಂದ ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರ ಭಾವಚಿತ್ರಗಳನ್ನು ಒಂದೆಡೆಯಲ್ಲಿ ಸೇರಿಸಿ ಒಂದು ಪಟವನ್ನಾಗಿ ಪ್ರಕಟಿಸಿದರು. ಅಧ್ಯಕ್ಷರಾದವರ ವ್ಯಕ್ತಿಚಿತ್ರ ಬರೆಯಿಸಿ ಈ ಭಾವಚಿತ್ರಗಳೊಡನೆ ಒಂದು ಪುಸ್ತಕ ಪ್ರಕಟಿಸಬೇಕೆಂಬ ಯೋಚನೆ ಮಾಡಿದ್ದರು. ಅದು ಕೈಗೂಡಲಿಲ್ಲ. ಆ ಕೆಲಸ ಇನ್ನಾದರೂ ಆಗಬೇಕಾದದ್ದೇ. ಶ್ರೀನಿವಾಸರಾಯರ ಇವೆರಡೂ ಕೃತಿಗಳು ಅವರ ಕನ್ನಡ ಅಭಿಮಾನದ ದ್ಯೋತಕವಾಗಿವೆ.

ಶ್ರೀನಿವಾಸರಾಯರು ತೆಗೆದ ಎಲ್ಲ ಚಿತ್ರಗಳಲ್ಲಿ ಬಿಷ್ಟಪ್ಪನ ಗೋಪುರ ವೊಂದು ಇದ್ದೇ ಇದೆ. ಛಾಯಾಚಿತ್ರದ ಪಡಿಯಚ್ಚಿಗೆ "ಶ್ರೀ. ಕಂ." ಮುದ್ರೆ. ಇವೆರಡೂ ಅವರ ಟ್ರೇಡಮಾರ್ಕ. ಇದಿಷ್ಟು ವ್ಯವಹಾರವಾದರೆ ಅವರ ಉಳಿದ ಬಾಳೆಲ್ಲಾ ಕನ್ನಡಕ್ಕೆ ಮೀಸಲು. ಅವರದು ಕನ್ನಡದ ಕಲೆ. ಅದನ್ನು ತಮ್ಮ ಎಲ್ಲಾ ರಂಗದಲ್ಲಿಯೂ ಚಿತ್ರಿಸುತ್ತಿದ್ದರು.

ಮುಂದೆ ಅವರು ನಾಡಿನಲ್ಲಿ ಸಮಾವೇಶವಾದರು. ಸಾಹಿತ್ಯಪರಿಷತ್ತು

ಏಕೀಕರಣಸಂಘ, ವಿದ್ಯಾವರ್ಧಕಸಂಘ, ವ್ಯಾಯಾಮಶಾಲೆ, ಕರ್ನಾಟಕ ಟಾಕೀಸ್,—ಜಯಕರ್ನಾಟಕ, ಜಯಂತಿ, ಸಂಯುಕ್ತಕರ್ನಾಟಕ—ಇವೆಲ್ಲಾ ಸರಿಯಾಗಿ ನಡೆಯಬೇಕು. ವೆಂಕಟರಾಯರು, ಕೃಷ್ಣರಾಯರು, ಶ್ರೀಕಂಠಯ್ಯನವರು ಇವರಲ್ಲೆಲ್ಲ ಅಪಾರ ಅಭಿಮಾನ. ಶ್ರೀನಿವಾಸರಾಯರು ಅಪ್ಪದ ಸಂಸ್ಥೆಯಿಲ್ಲ; ಒಪ್ಪದ ವ್ಯಕ್ತಿಯಿಲ್ಲ.

ಆಲೂರ ವೆಂಕಟರಾಯರ ಷಷ್ಟ್ಯಬ್ಧಿಪೂರ್ತಿ ಉತ್ಸವ ನಡೆದಿತ್ತು. ಎಲ್ಲಾ ಕಡೆಯಲ್ಲಿ ಕುಲಪುರೋಹಿತರಿಗೆ ಮರ್ಯಾದೆ ಮಾಡಿದರು. ಶೀನಪ್ಪನ ಮನೆಯಲ್ಲಿ ' ಕಡುಬಿನ ಕಾಳಗ 'ವಾಯಿತು. ಜಿಲೇಬಿ ನಮ್ಮದಲ್ಲ; ಕರಿಗಡಬು ಕನ್ನಡ ಸಂಸ್ಕೃತಿ ಎಂದರು ಶೀನಪ್ಪ. ಇದು ಅವರದೇ ಸಿದ್ಧಾಂತ.

ಪುಣೆಯಲ್ಲಿ ಕನ್ನಡಿಗರಿಗೆ ಇಲ್ಲದ್ದು ಧಾರವಾಡದ ಮರಾಠಿಗರಿಗೇಕೆ—ಇದೂ ಒಂದು ಅವರ ಸಿದ್ಧಾಂತ. ಪುಣೆಯ ಕನ್ನಡಿಗರು ಜಾಗ್ರತರಾಗಬೇಕು. ಧಾರವಾಡದಲ್ಲಿ ಮರಾಠಿಗರು ಸಾಧಿಸಿದ್ದನ್ನು ಅವರು ಪುಣೆಯಲ್ಲಿ ಸಾಧಿಸಬೇಕು. ಪುಣೆಯ ಮರಾಠಿಗರು ಧಾರವಾಡದಲ್ಲಿ ತಮ್ಮವರಿಗೆ ದೊರೆತ ಮರ್ಯಾದೆ ಪುಣೆಯಲ್ಲಿ ಕನ್ನಡಿಗರಿಗೆ ನೀಡಬೇಕು. ಈ ವಾದದಲ್ಲಿಯ ಮರಾಠಿ ವೈರಕ್ಕಿಂತ ಕನ್ನಡದ ಕಳಕಳಿ ಅರ್ಥಮಾಡಿಕೊಳ್ಳಬೇಕು.

ಹಿಂದೆ ಕನ್ನಡಕ್ಕಾಗಿ ಕೆಲಸಮಾಡಿದ ಹಿರಿಯರ ಬಗ್ಗೆ ಶೀನಪ್ಪನವರಲ್ಲಿ ಎಂಥ ಅಭಿಮಾನ! ಅವರ ಸ್ಮೃತಿ ನಮ್ಮ ಹೃತ್ಪಟಲದಲ್ಲಿ ಸದಾ ಮೂಡಿರಬೇಕು. ಅದೊಂದು ಮಾರ್ಗದರ್ಶಿಯಾಗಿ ಉಳಿಯಬೇಕು. ಕನ್ನಡದ ಹೋರಾಟದ ಇತಿಹಾಸ ನಮ್ಮ ಮುಂದಿನ ಪೀಳಿಗೆಗೆ ಕೈಗೋಲಾಗಲಿ ಎಂಬ ಹಂಬಲ ಶ್ರೀನಿವಾಸರಾಯರದು. ಮುದವೀಡು ಕೃಷ್ಣರಾಯರ ಖಂಡ-ತುಂಡ ಲೇಖನಗಳನ್ನು ಸಂಗ್ರಹವಾಗಿ ಸಂಪಾದಿಸಿ ಪ್ರಕಟಿಸಬೇಕು ಎಂದು ಅವರ ಆಲೋಚನೆಯಿತ್ತು. ಅದರದೊಂದು ಯೋಜನೆಯನ್ನೇ ಮಾಡಿ ಕೆಲಸ ಕೈಕೊಳ್ಳಬೇಕೆಂಬ ಆಶೆ ತೀವ್ರವಾಗಿತ್ತು ಅವರಿಗೆ. ಆ ಕೆಲಸ ಇನ್ನಾದರೂ ನಡೆದರೆ ಶೀನಪ್ಪನವರ ಆತ್ಮ ಅಲ್ಲಿಂದಲೇ ನಲಿದಾಡೀತು.

ಇಂಥ ನಿರ್ದಿಷ್ಟವಾದ ಕೆಲಸಗಳಲ್ಲದೆ ನಾಡಿನ ಸರ್ವತೋಮುಖ ಉನ್ನತಿಯ ಎಲ್ಲ ವಿಧಾನಗಳಲ್ಲಿಯೂ ಇವರ ಕೈ ಸಹಾಯಕವಾಗಿತ್ತು. ಒಣ ಉಪಚಾರಕ್ಕಾಗಿ, ಇಲ್ಲದ ದಾಕ್ಷಿಣ್ಯಕ್ಕಾಗಿ, ಸಲ್ಲದ ದೊಡ್ಡತನಕ್ಕಾಗಿ ಅವರು

ಎಂದೂ ಕನ್ನಡದ ಹಟ ಬಿಡಲಿಲ್ಲ. ಇದರಿಂದ 'ಒರಟು ಜನ' ಎನ್ನಿಸಿ-ಕೊಂಡರು; ಅಪಮಾನ ಸಹಿಸಿದರು, ಹಾನಿ ಸೋಸಿದರು; ಹಟ ಸಾಧಿಸಿದರು. ಅದೇ ಲಾಭವೆಂದರು; ಅದೇ ಮರ್ಯಾದೆಯೆಂದರು

ಅವರ ದುರಂತ ಮರಣ ಬಿಳೀ ಮುಗಿಲ ಸಿಡಿಲಿನಂತೆ ಅನಪೇಕ್ಷಿತ, ಅದಕ್ಕಿಂತ ಘಾತುಕ. ಅವರ ಜನಪ್ರಿಯತೆಗೆ ಅಂದು ಸ್ಮಶಾನಯಾತ್ರೆಗೆ ನೆರೆದ ಜನರ ಗುಂಪೇ ಸಾಕ್ಷಿ.

ಕನ್ನಡದ ವೃಕ್ಷ ಆಳವಾಗಿ ಬೇರುಬಿಟ್ಟ ಹಳೇಮರ. ಇದರಲ್ಲಿ 'ಬೀಳಲು ಬಿಗಿದ' ಟೊಂಗೆಗಳೆಷ್ಟೊ ಇವೆ. ಸಿಡಿಹಾಯ್ದ ಭಾಗವೂ ಇದ್ದೀತು. ಆದರ ಟಿಸಿಲೊಡೆದು ಪುಷ್ಟವಾಗಿ ಬೆಳೆದು ಎಲೆಗಳಿಂದ–ಹೂಗಳಿಂದ ಕಂಗೊಳಿಸುವ ಮರವಿದು. ಇದರ ನೆಳಲೇ ಚೈತನ್ಯದಾಯಿ; ಇದು ಫಲಬಿಟ್ಟ ಮರ, ಬಿಡುವ ಮರ. ಇದರದೊಂದು ಒಳ್ಳೆಯ ರೆಂಬೆಯನ್ನು ಕಾಲನು ಕಡಿದು ಚೆಲ್ಲಿದರೆ ಮಗುವಿನ ಕೈತುತ್ತು ಕಾಗೆ ಹಾರಿ ಬಡಿದ ಹಾಗೆ.—ಇದು 'ವಿಧಿ' ಯಲ್ಲದೆ ಇನ್ನೇನು!

## ದಿವಂಗತ

# ಸೌ. ಶ್ಯಾಮಲಾದೇವಿ

**'ಹೂಬಿಸಿಲು'** ನೋಡಿಲ್ಲವೇ ನೀವು? ಬಿಸಿಲೇ ಹೂವಾಗಿರುವುದು ಎಷ್ಟು ಸೊಗಸು? ಬಿಸಿಲು ಪ್ರಖರವಾಗಿರುವಾಗ ಕಣ್ಣು ಕತ್ತಲೆಗೂಡಿಸುತ್ತದೆ; ಹೂವಾಗಿರುವಾಗ ವಸ್ತುಗಳೆಲ್ಲ ಕಣ್ಣಿಗೆ ಬಿಡಿಬಿಡಿಯಾಗಿ ಗೋಚರವಾಗುತ್ತವೆ. ಹಗುರವಾದ ಬೆಳಕಿನಲ್ಲಿ ಸುಂದರವಾಗಿ ಕಾಣುತ್ತವೆ. 'ಹೂಬಿಸಿಲು' ಕಥಾ-ಸಂಗ್ರಹದಲ್ಲಿನ ಕಥಾವಸ್ತುಗಳೂ ಅಷ್ಟು ರಮ್ಯವಾಗಿ, ಅಷ್ಟೇ ಸ್ಪಷ್ಟವಾಗಿ ಕಾಣುತ್ತವೆ.

ಇಂದು **'ಹೊಂಬಿಸಿಲು'** (ಸೌ. ಶ್ಯಾಮಲಾದೇವಿಯವರ ೨ನೆಯ ಕಥಾಸಂಗ್ರಹ) ಹೊರಬಿದ್ದಿದೆ. ಆದರೆ ಈ ಎರಡು ಸಂಗ್ರಹಗಳ ಕರ್ತೃ ನಮ್ಮನ್ನಗಲಿ ಹೋಗಿದ್ದಾರೆ. ಬಿಸಿಲೆಲ್ಲ ಆರಿ-ಹಾರಿದೆ. ಕತ್ತಲೆ ತೂರಿ ಕವಿದುಬಂದಿದೆ. ಈ ಕತ್ತಲೆಯಲ್ಲಿ ನಾವು ಏನೂ ನೋಡುವಂತಿಲ್ಲ. ನಮ್ಮ ಒಳಗಣ್ಣಿಗೆ ಕಾಣುವ ಈ ಲೇಖಕಿಯ ಸ್ಮೃತಿಚಿತ್ರವನ್ನೇ ಧೇನಿಸುತ್ತ ಕುಳಿತುಕೊಳ್ಳಬೇಕಾಗಿದೆ.

ಸೌ. ಶ್ಯಾಮಲಾದೇವಿ ಎಂದೊಡನೆ ಮೊದಲು ಅವರ ಭವ್ಯ-ದಿವ್ಯವಾದ ರೂಪು ಕಣ್ಣೆದುರು ಬರುತ್ತದೆ. ದೇಹದಾರ್ಢ್ಯ ಇಂಥದಾದರೂ ಮುಖದಲ್ಲಿ ಹಸುಳೆಯ ಎಳೆನಗೆ. ಪರಿಚಿತರೊಡನೆಲ್ಲಾ ಸಲಿಗೆಯ ಸರಳಮಾತು· ಹೊಸಬ-ರೊಡನೆ ವಿನಯದ ಇನಿಮಾತು. ಮಾತು ಹೀಗೇ ಮೊದಲಾಗಿ ಆತ್ಮೀಯತೆಯ ನಾಡಿನಲ್ಲಿ ಸಂಚರಿಸಿದ ಹಾಗೆ ಅನುಭವವಾಗುತ್ತಿತ್ತು, ಅವರನ್ನು ಕಂಡು ಮಾತಾಡಿದವರಿಗೆ.

ಸೌ. ಶ್ಯಾಮಲಾದೇವಿ ಈಗ ಇರುತ್ತಿದ್ದರೆ ಅವರಿಗೆ ೩೩ ವರುಷದ ನಡುಹರೆಯ. ಅವರು ತಮ್ಮನ್ನೇ ಆಳಿಕೊಂಡು ಸ್ವಚ್ಛಂದದಿಂದ ಕಾರ್ಯ ನಡೆಸಿದ್ದು ಈಚಿನ ಹತ್ತುವರುಷದಲ್ಲೇ. ಬರೆಯುವ ಪ್ರೀತಿಯಿಂದಲೇ ಇವರು ಕೆಲಸಕ್ಕೆ ಮೊದಲಿಟ್ಟರು. ಇವರ ಪತಿ ಸಂಪಾದಕರಾಗಿದ್ದ 'ಜಯಕರ್ನಾಟಕ' ದಲ್ಲಿ ಅವು ಆಗಾಗ ಬೆಳಕು ಕಂಡವು. ಇವರು ಮೊದಮೊದಲು ಬರೆದ ಕಥೆಗಳು ನಡೆದ ಕೆಲವು ಘಟನೆಗಳನ್ನು ಅವಲಂಬಿಸಿ ಚಿತ್ರಿಸಿದ ಸರಲ

